# ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಪ್ರಬಂಧ







ಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಾಜ ವಿಜ್ಞಾನಗಳ ನಿಕಾಯ
ಡ ವಿಶ್ವವಿದ್ಯಾಲಯ, ಹಂಪಿ
ದ್ಯಾರಣ್ಯ ೫೮೩ ೨೭೬

೨೦೦೭-೨೦೦೮

# ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳ ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)





ಸಂಶೋಧಕಿ
ಶ್ರದ್ಧಾ ದೇಸಾಯಿ



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳ ಅಧ್ಯಯನ

## ಪರಿವಿಡಿ

ರಾಯಚೂರು ತಾಲೂಕಿನ ನಕ್ಷೆ




| | | | |
|---|---|---|---|
| ...ತಲಾಪುರ | 1. | ಗೋಡಿಹಾಳ | |
| ...ಡ | 2. | ದಿನ್ನಿ | |
| ...ಪೇಟೆ | 3. | ಕಲ್ಮಾಲ | |
| ...ಕಲ್ | 4. | ಸುಲ್ತಾನಪುರ | |
| ...ರು | 5. | ಯರಗೇರಾ ಕೆರೆ | |
| ...ಸೂಗೂರು | 6. | ಮಲಿಯಾಬಾದ್ | |
| ...ನೂರು | 7. | ಬೋಳಮಾನದೊಡ್ಡಿ | |
| ...ಳ್ಳಿ | 8. | ಹೀರಾಪುರ | |
| ...ೀದೂರು | 9. | ಗಧಾರ | |
| ...ಟ್ಟಾಲೆ | 10 | ಆಶಾಪುರ | |
| ...ಾರಿ | 11 | ಜಾಲಿಬೆಂಚಿ | |
| ...ರು | 12 | ರಾಯಚೂರು | |
| ...ಳ | 13. | ಬಾವಿದೊಡ್ಡಿ | |

● — ಜಿಲ್ಲಾ ಕೇಂದ್ರ

• — ಹಳ್ಳಿಗಳು

— ನದಿಗಳು

— ಗಡಿ

## ಪ್ರಸ್ತಾವನೆ

ದೇವಾಲಯಗಳು ಮಾನವನ ನಂಬಿಕೆಯ ಪ್ರತೀಕಗಳಾಗಿವೆ. ಮಾನವನು ನಿಸರ್ಗದಲ್ಲಿ ಒಂದು ಅತೀತವಾದ ಶಕ್ತಿ ಇದೆ ಎಂದು ಅರಿತ. ಅದು ಯಾರ ಕಣ್ಣಿಗೂ ಕಾಣಸಿಗದು. ಆದ ಕಾರಣ ಆ ಶಕ್ತಿಯನ್ನು ಅಮೂರ್ತವಾದುದು ಎಂದು ಕರೆಯಲಾಗಿದೆ. ಮನುಷ್ಯನು ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂತಹ ಶಕ್ತಿಗಳ ಬೆಂಬಲ ಅವಶ್ಯಕವೆಂದು ಆ ಶಕ್ತಿಗೆ ಮೂರ್ತಿ ರೂಪ ನೀಡಿ ಪೂಜಿಸಲು ಆರಂಭಿಸಿದನು. ನಂತರ ಈ ಪ್ರತಿಮೆಯ ರಕ್ಷಣೆಗಾಗಿ ವಾಸ್ತುವನ್ನು ಅನುಸರಿಸಲಾಯಿತು. ಭೂಮಿಯ ಮೇಲೆ ನಿರ್ಮಾಣ ಮಾಡಿರುವ ಕಟ್ಟಡಗಳನ್ನು, ಗ್ರಹಗಳು ಮತ್ತು ದೇಗುಲಗಳ ವಾಸ್ತುಗಳೆಂದು ಕರೆಯಲಾಗಿದೆ. ಆದರೆ ದೇಗುಲದಲ್ಲಿ ಪ್ರತಿಮೆಯನ್ನು ಸ್ಥಾಪಿಸಿ ನಂತರ ಪೂಜೆಯನ್ನು ಮಾಡಲು ಕಟ್ಟಿದ ಕಟ್ಟಡವನ್ನು ದೇವಾಲಯವೆಂದು ಕರೆಯಲಾಯಿತು.

ಇಂತಹ ದೇವಾಲಯಗಳು ಜನರನ್ನು ಸಂಸ್ಕೃತಿ ಮತ್ತು ಸನ್ಮಾರ್ಗದ ಕಡೆಗೆ ತಿರುಗಿಸಲು ಕಾರಣವಾಗುತ್ತದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಭಯ, ಭಕ್ತಿ ಮತ್ತು ಶ್ರದ್ಧೆಯನ್ನು ಈ ದೇವಾಲಯಗಳ ಮೂಲಕ ಪಡೆಯಬಹುದಾಗಿದೆ.

ಮಾನವನು ತನ್ನ ಬದುಕಿಗಾಗಿ ಪ್ರಕೃತಿಯ ಜೊತೆಗೆ ಸಮರವನ್ನು ನಡೆಯಿಸಬೇಕಾಗುತ್ತದೆ. ಪ್ರಕೃತಿಯಲ್ಲಿ ಸಂಭವಿಸುವ ವಿಕೋಪಗಳಿಂದ ರಕ್ಷಿಸಿಕೊಳ್ಳಲು ದೇವರನ್ನು ಪೂಜಿಸುತ್ತಾನೆ. ಹೀಗೆ ದೇವಾಲಯವು ಒಂದು ಪವಿತ್ರ ಸ್ಥಾನವಾಗಿ ಮಾರ್ಪಟ್ಟಿತು.

ದೇವಾಲಯಗಳ ಪ್ರಾಚೀನತೆಯತ್ತ ಗಮನ ಹರಿಸಿದಾಗ ಕ್ರಿಸ್ತಶಕ ಆರಂಭ ಕಾಲದಲ್ಲಿ ಇಟ್ಟಿಗೆಯ ದೇವಾಲಯಗಳು ಇದ್ದವೆಂದು ಪ್ರಾಚ್ಯಾವಶೇಷಗಳಿಂದ ಲಭ್ಯವಾಗಿದೆ ದೇವಾಲಯ ನಿರ್ಮಾಣದಲ್ಲಿ ಇಟ್ಟಿಗೆಗಿಂತ ಶಿಲೆಯ ದೇವಾಲಯಗಳು ಶ್ರೇಷ್ಠ ಮತ್ತು ಬಾಳಿಕೆ ಬರುವಂತಹವುಗಳು ಆಗಿವೆ. ಆದ್ದರಿಂದ ಅನೇಕ ಸಾಮ್ರಜ್ಯಗಳ ಸಾಮ್ರಾಟರು ತಾವು ಅಧಿಕಾರಕ್ಕೆ ಬಂದ ನಂತರ ಅವರ ಮೊದಲ ಕಾರ್ಯವೆಂದರೆ ದೇವಾಲಯಗಳ ನಿರ್ಮಾಣ ಹಾಗೂ ಇದ್ದ ದೇವಾಲಯಗಳ ಜೀರ್ಣೋದ್ಧಾರ ಮಾಡುವುದಾಗಿತ್ತು. ತಮ್ಮ ಪರಿಸರದಲ್ಲಿ ದೊರೆಯುವ ಶಿಲೆಯನ್ನು ಬಳಸಿ ದೇವಾಲಯಗಳನ್ನು ನಿರ್ಮಿಸಿದ್ದಾರೆ.

ಧರ್ಮ ಮತ್ತು ದೇವಾಲಯಗಳಿಗೆ ಅವಿನಾಭಾವವಾದ ಸಂಬಂಧವಿದೆ ಇವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಧರ್ಮ ಬೆಳೆದಂತೆ ದೇವಾಲಯಗಳು ಬೆಳೆದಿವೆಯೆಂಬುದನ್ನು ಅಲ್ಲಗಳೆಯಲಾಗದು. ಭಾರತೀಯ ಪರಿಸರದಲ್ಲಿ ಧರ್ಮ ಮತ್ತು ದೇವಾಲಯಗಳ ಬೆಳವಣಿಗೆಯ ಚರಿತ್ರೆಯನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಬೆಳೆದ ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಮುಂತಾದ ಧರ್ಮಗಳಿಗೆ ಭದ್ರವಾದ ನೆಲೆಗಳು ಎಂಬಂತೆ ಆಲಯಗಳು ನಿರ್ಮಾಣವಾದವು. ದೇವಾಲಯಗಳು ಒಂದು ನಾಡಿನ ಸಂಸ್ಕೃತಿಯನ್ನು ಅರಿಯಲು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ. ಪ್ರಾಚೀನ ಸಂಸ್ಕೃತಿಯನ್ನು ಸಹ ತಿಳಿಸುವ ದೇವಾಲಯಗಳು ಪುರಾತನ ಚರಿತ್ರೆಯನ್ನು ಒತ್ತಿ ಸಾರುತ್ತದೆ. ದೇವಾಲಯದ ಕಲೆಯನ್ನು ಉನ್ನತ ಮಟ್ಟದಲ್ಲಿ ಬೆಳೆಯಿಸಿರುವುದಕ್ಕೆ ಶಾಸನಗಳು, ಗ್ರಂಥಗಳು ಆಧಾರವನ್ನು ಒದಗಿಸುತ್ತವೆ. ಸಂಗೀತ, ನೃತ್ಯ ಮುಂತಾದ ಕಲೆಗಳು ಈ ದೇವಾಲಯಗಳಿಂದ ಬೆಳೆದು ಬಂದವು. ಹಾಗೆಯೇ ದೇವಾಲಯದ ವಾಸ್ತುಶಿಲ್ಪ ಮೂರ್ತಿಶಿಲ್ಪಗಳು ಯಾವ ಯಾವ ಕಾಲಘಟ್ಟದಲ್ಲಿ ಯಾವ ರೀತಿಯ ಬದಲಾವಣೆಗಳನ್ನು ಹೊಂದಿದವು ಎಂಬುದಕ್ಕೆ ಸಾಕ್ಷಿಭೂತವಾಗಿ ನಿಂತಿವೆ.

ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿವೆ. ಸಾಮಾಜಿಕ ಜೀವನದ ಅಂಗಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಶಿಕ್ಷಣ ನೀಡುವಲ್ಲಿ ಪ್ರಮುಖ ಪಾತ್ರವನ್ನು

ವಹಿಸಿದ್ದವು. ಧರ್ಮದ ಮೂಲಕ ದೇವಾಲಯಗಳು ಜನತೆಯನ್ನು ನಿಯಂತ್ರಿಸುತ್ತಿದ್ದವು. ಮತ್ತು ಧರ್ಮ ಪ್ರಸಾರದ ಕಾರ್ಯವನ್ನು ನಿರ್ವಹಿಸುತ್ತದ್ದವು. ದೇವಾಲಯಗಳಲ್ಲಿ ಅಂಗಭೋಗ ಮತ್ತು ರಂಗಭೋಗ ಚಟುವಟಿಕೆಗಳು ನಡೆಯುತ್ತಿದ್ದವು.

**ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ರಾಯಚೂರು ತಾಲೂಕಿಗೆ ಸಂಬಂಧಿಸಿದಂತೆ ಈವರೆಗೆ ನಡೆದ ಅಧ್ಯಯನಗಳು ನಾನಾ ದೃಷ್ಟಿಕೋನಗಳಿಂದ ವಿವಿಧ ವಿದ್ವಾಂಸರುಗಳು ಅಧ್ಯಯನವನ್ನು ನಡೆಯಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಚನ್ನಬಸಪ್ಪ ಎಸ್. ಪಾಟೀಲರವರ "**ಟೆಂಪಲ್ಸ್ ಆಫ್ ರಾಯಚೂರು ಅಂಡ್ ಬಳ್ಳಾರಿ ಡಿಸ್ಟ್ರಿಕ್ಟ್**" ಎಂಬ ಪುಸ್ತಕದಲ್ಲಿ ರಾಯಚೂರು ಜಿಲ್ಲೆಯ ಕೆಲವು ದೇವಾಲಯಗಳನ್ನು ಕುರಿತು ಚರ್ಚಿಸಿದ್ದಾರೆ.

ಕೆ. ಮಹೇಶರವರು "ದೇವದುರ್ಗದ ಶಾಸನಗಳು ಮತ್ತು ಪ್ರಾಚ್ಯಾವಶೇಷಗಳು" ಎಂಬ ನಿಬಂಧದಲ್ಲಿರಾಯಚೂರಿನ ನೆರೆಯ ತಾಲೂಕಾದ ದೇವದುರ್ಗಕ್ಕೆ ಸಂಬಂಧಿಸಿದ ಶಾಸನ ಮತ್ತು ದೇವಾಲಯಗಳ ಕುರಿತು ಅಧ್ಯಯನ ನಡೆಸಿದ್ದಾರೆ. ಅವರ ಮತ್ತೊಂದು ಎಂ.ಫಿಲ್. ಪ್ರಬಂಧವು ಕೆಲವು ದೇವಾಲಯಗಳನ್ನು ಮಾತ್ರ ಅಧ್ಯಯನಕ್ಕೆ ಒಳಗೊಂಡಿದ್ದಾರೆ.

ಚನ್ನಬಸವ ಹಿರೇಮಠ ಅವರು **ಎಡೆದೊರೆನಾಡು** ಎಂಬ ಕಿರುಪುಸ್ತಕದಲ್ಲಿ ರಾಯಚೂರು ಒಂದು ಆಡಳಿತ ವಿಭಾಗವಾಗಿತ್ತು ಎಂದು ಚರ್ಚಿಸಿದ್ದಾರೆ. ಆದರೆ ಅವರು ಸಾಂಸ್ಕೃತಿಕವಾಗಿರುವ ಯಾವ ವಿಷಯದತ್ತ ಗಮನಹರಿಸಿಲ್ಲ. ರಾಯಚೂರು ಜಿಲ್ಲೆಯ ದೇವಾಲಯಗಳ ಬಗ್ಗೆ ಹಲವಾರು ಬಿಡಿಲೇಖನಗಳು ಪ್ರಕಟವಾಗಿವೆ. ಆದರೆ ಆ ತಾಲೂಕಿನ ಪ್ರಾಚೀನ ದೇವಾಲಯಗಳು ಗಮನದಲ್ಲಿಟ್ಟುಕೊಂಡು ಮೂರ್ತಿಶಿಲ್ಪಗಳು, ಶಾಸನಗಳ ಕ್ರಮಬದ್ಧವಾದ ಅಧ್ಯಯನಗಳು ನಡೆದಿಲ್ಲ. ಆದರೆ ಪ್ರಸ್ತುತ ಈ ಅಧ್ಯಯನದಲ್ಲಿ ಈ ಎಲ್ಲಾ ಮೇಲಿನ ಅಂಶಗಳನ್ನು ಸವಿಸ್ತಾರವಾಗಿ ಅಧ್ಯಯನ ಮಾಡುವುದಾಗಿದೆ.

**ಅಧ್ಯಯನದ ಉದ್ದೇಶ:**

ಪ್ರಸ್ತುತ ಅಧ್ಯಯನದ ಶೀರ್ಷಿಕೆಯು "ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳ ಅಧ್ಯಯನ" ಎಂಬುದಾಗಿದ್ದು ಅಜ್ಞಾತವಾದ ಅನಾದಾರಣೆಯವಾಗಿರುವ ದೇವಾಲಯಗಳನ್ನು ದಾಖಲಿಸುವುದು ಆಗಿದೆ. ದೇವಾಲಯದ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಬಳಸಿಕೊಂಡು ಒಟ್ಟಾರೆಯಾಗಿ ದಕ್ಷಿಣ ರಾಯಚೂರು ತಾಲೂಕಿನ ಭಾಗದ ದೇವಾಲಯಗಳ ಅಧ್ಯಯನವನ್ನು ಮತ್ತು ಅವುಗಳ ಸವಿವರವಾದ ಚಿತ್ರಣವನ್ನು ಕಟ್ಟಿಕೊಡುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ರಾಯಚೂರು ಪ್ರದೇಶವು ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂಬುದು ಅಲ್ಲಿನ ದೇವಾಲಯಗಳನ್ನು ಇತಿಹಾಸ ಮತ್ತು ಅವಶೇಷಗಳಿಂದ ತಿಳಿದುಬರುತ್ತದೆ. ರಾಯಚೂರಿನ ಪ್ರಾಚೀನ ದೇವಾಲಯಗಳನ್ನು ಕೇಂದ್ರ ಬಿಂದುವಾಗಿಟ್ಟುಕೊಂಡು ಇದುವರೆಗೆ ಯಾವುದೇ ಅಧ್ಯಯನಗಳು ನಡೆದಿಲ್ಲ. ಈ ಕಾರಣದಿಂದ ರಾಯಚೂರಿನ ಪ್ರಾಚೀನ ದೇವಾಲಯಗಳ ಸಮಗ್ರ ಅಧ್ಯಯನವು ಈ ಪ್ರಬಂಧದ ಮೂಲಾಂಶವಾಗಿದೆ.

**ಅಧ್ಯಯನದ ವ್ಯಾಪ್ತಿ:**

ರಾಯಚೂರು ನಗರವನ್ನು ಒಳಗೊಂಡಂತೆ ಈ ತಾಲೂಕಿನ ದಕ್ಷಿಣ ಭಾಗದಲ್ಲಿರುವ ಗ್ರಾಮಗಳ ದೇವಾಲಯಗಳನ್ನು ಮತ್ತು ಲಭ್ಯವಿರುವ ಪ್ರಾಚ್ಯಾವಶೇಷಗಳನ್ನು ಕುರಿತು ಅಧ್ಯಯನ ನಡೆಯಿಸಲಾಗುವುದು. ದಕ್ಷಿಣ ರಾಯಚೂರು ತಾಲೂಕಿಗೆ ಹೊಂದಿಕೊಂಡಂತೆ ಮಾನ್ವಿ ತಾಲೂಕು ಮತ್ತು ನೆರೆ ರಾಜ್ಯದ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಗಡಿ ಪ್ರದೇಶದ ಕೆಲವು ಗ್ರಾಮಗಳನ್ನು ಸಹ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗುವುದು.

ದಕ್ಷಿಣ ತಾಲೂಕಿನ ಭಾಗಗಳಾದ ಪ್ರಾಚೀನ ಕಾಲದ ಎಡದೊರೆ ನಾಡು-೨೦೦೦, ಅಯ್ಯಣವಾಡಿ-೩೦೦, ಮತ್ತು ಆಯಿಜ್ಯ-೩೦೦. ಆಡಳಿತ ವಿಭಾಗಗಳಾಗಿದ್ದವು. ಪ್ರಾಚೀನ ಆಡಳಿತ ವಿಭಾಗಗಳಲ್ಲಿರುವ ದೇವಾಲಯ, ಮೂರ್ತಿಶಿಲ್ಪ, ಶಾಸನ ಮತ್ತು ಇತರೆ ಪ್ರಾಚ್ಯಾವಶೇಷಗಳನ್ನು ಕುರಿತಂತೆ ಅಧ್ಯಯನ ನಡೆಯಿಸುವುದಾಗಿದೆ.

ಹಲವಾರು ವಿದ್ವಾಂಸರು ರಾಯಚೂರು ತಾಲೂಕಿಗೆ ಸಂಬಂಧಿಸಿದಂತೆ ಅಧ್ಯಯನಗಳನ್ನು ಕೈಗೊಂಡಿರುವವರಾದರೂ ರಾಯಚೂರು ತಾಲೂಕಿಗೆ ಸಂಬಂಧಿಸಿದಂತೆ ಅಧ್ಯಯನಗಳು ನಡೆಸಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ದಕ್ಷಿಣ ರಾಯಚೂರು ತಾಲೂಕಿನ ಪ್ರಾಚ್ಯಾವಶೇಷಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು. ಪ್ರಸ್ತುತ ಭಾಗ ಅಂದರೆ ಅಯ್ಯಣವಾಡಿ–೩೦೦ ಕಲ್ಯಾಣ ಚಾಳುಕ್ಯರ ಕಾಲದಿಂದ ಹಿಡಿದು ವಿಜಯನಗರೋತ್ತರ ಕಾಲದ ದೇವಾಲಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು.

**ಅಧ್ಯಯನದ ವಿಧಾನ:**

ಪ್ರಸ್ತುತ ಅಧ್ಯಯನದಲ್ಲಿ ಅಯ್ಯಣವಾಡಿ–೩೦೦ ಎಂಬ ಪ್ರಾಚೀನ ಆಡಳಿತ ವಿಭಾಗವು ಇಂದಿನ ದಕ್ಷಿಣ ರಾಯಚೂರು ಪ್ರದೇಶದ ಬಹುತೇಕ ಭಾಗಗಳನ್ನು ಒಳಗೊಂಡಿದ್ದು ಅಲ್ಲಿರುವ ಗ್ರಾಮಗಳ ಕಾರ್ಯಕ್ಷೇತ್ರ ಕೈಗೊಳ್ಳುವುದರ ಮೂಲಕ ಅಲ್ಲಿನ ಪ್ರಾಚೀನ ದೇವಾಲಯಗಳ ದಾಖಲೀಕರಣ, ತಳನಕ್ಷೆ ರಚನೆ, ಛಾಯಚಿತ್ರ ಮತ್ತು ಇತರೆ ಸಂಬಂಧಿ ಮಾಹಿತಿಗಳನ್ನು ದಾಖಲಿಸುವುದು ಆಗಿದೆ. ದೇವಾಲಯಗಳಿಗೆ ಸಂಬಂಧಿಸಿದಂತೆ ವಾಸ್ತುಶಿಲ್ಪ, ಕಲೆ, ಶಾಸನಗಳಲ್ಲಿನ್ನ ಮಾಹಿತಿ ಮೌಖಿಕ ಪರಂಪರೆ, ಜನಪದ ನಂಬಿಕೆ ಪುರಾಣ, ಸ್ಥಳೀಯ ಚರಿತ್ರೆ ಮುಂತಾದ ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಿ, ಅನುಷಂಗಿಕ ಆಕರಗಳ ಮೂಲಕ ಮಾಹಿತಿಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ, ಚರ್ಚಿಸಿ ನಂತರ ಪ್ರಬಂಧ ರಚಿಸಲಾಗುವುದು.

***

## ೨.೧ ಭೌಗೋಳಿಕ ಹಿನ್ನಲೆ

ರಾಯಚೂರು ಕರ್ನಾಟಕ ರಾಜ್ಯದ ಒಂದು ಜಿಲ್ಲಾ ಕೇಂದ್ರವಾಗಿದೆ. ಇದೇ ತಾಲೂಕು ಮತ್ತು ಜಿಲ್ಲೆಯ ಆಡಳಿತ ಕೇಂದ್ರವಾಗಿದೆ. ರಾಯಚೂರು ೧೬ ೧೨’ ಉತ್ತರ ಅಕ್ಷಾಂಶ ಮತ್ತು ೭೭°, ೨೧ ಪೂರ್ವ ರೇಖಾಂಶದಲ್ಲಿದೆ. ಉತ್ತರದಲ್ಲಿ ಗುಲ್ಬರ್ಗಾ ಜಿಲ್ಲೆ, ದಕ್ಷಿಣ ಮತ್ತು ಪೂರ್ವದಲ್ಲಿ ಆಂಧ್ರಪ್ರದೇಶ, ಪಶ್ಚಿಮದಲ್ಲಿ ದೇವದುರ್ಗ ಮತ್ತು ಮಾನ್ವಿ ತಾಲೂಕುಗಳಿಂದ ಸುತ್ತುವರಿದಿದೆ. ರಾಯಚೂರು, ಯರಗೇರಾ, ಕಲ್ಮಾಲ, ಚಂದ್ರಬಂಡೆ, ಗಿಲ್ಲೆಸುಗೂರು ಮತ್ತು ದೇವಸೂಗುರು ಇವು ತಾಲೂಕಿನ ಆರು ಹೋಬಳಿಗಳು. ೧೮೫ ಗ್ರಾಮಗಳಿರುವ ಈ ತಾಲೂಕಿನ ವಿಸ್ತೀರ್ಣ ೧೫೩೧.೫ ಚ.ಕಿ.ಮೀ. ಹಾಗು ಜನಸಂಖ್ಯೆ ೪,೩೫೩೮೦.[೧]

ವ್ಯವಸಾಯ ಉತ್ಪನ್ನ ವಾಣಿಜ್ಯ ಕೇಂದ್ರವಾಗಿರುವ ಈ ಊರು ಪ್ರಸಿದ್ಧಿಯನ್ನು ಪಡೆದಿದೆ.[೨] ರಾಯಚೂರು ಕೃಷ್ಣ–ತುಂಗೆಯರ ನಡುವಿನ 'ದೋ–ಆಬ್' ಹಾಗೂ 'ಎಡದೊರೆ ನಾಡು ಎಂದು ಕರೆಯಲಾಗಿದೆ. ದೋ–ಆಬ್ ಎಂದರೆ ಎರಡು ನದಿಗಳ ನಡುವಿನ ಪ್ರದೇಶ.[೩]

ಈ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದ ಉತ್ತರ ತಪ್ಪಲು ಪ್ರದೇಶದಲ್ಲಿ ನೆಲೆಸಿದೆ. ಬಂಡೆಗಲ್ಲುಗ, ಪರ್ವತಗಳಿಂದ, ಗಿಡಮರಗಳಿಲ್ಲದ ಬಯಲು ಭೂಮಿಯಿಂದ ಕೂಡಿದೆ. ಸಮುದ್ರಮಟ್ಟದಿಂದ ಇದರ ಎತ್ತರವು ೧೩೧೧ ಅಡಿ ಇರುತ್ತದೆ. ಈ ಜಿಲ್ಲೆಯಲ್ಲಿ ೫ ತಾಲೂಕುಗಳಿವೆ. ಅವುಗಳ ಲಿಂಗಸೂಗೂರು, ದೇವದುರ್ಗ, ಮಾನ್ವಿ, ರಾಯಚೂರು ಮತ್ತು ಸಿಂಧನೂರು. ತಾಲೂಕಿನ ಉತ್ತರಕ್ಕೆ ಕೃಷ್ಣಾ ನದಿ ಇದ್ದರೆ ದಕ್ಷಿಣದಲ್ಲಿ ತುಂಗಭದ್ರಾ ನದಿಯ ಹರಿಯುತ್ತದೆ.[೪]

ಇವೆರಡೂ ನದಿಗಳ ನಡುವಿನ ಭಾಗವು ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ರಾಯಚೂರು ತಾಲೂಕಿನ ಪೂರ್ವಕ್ಕೆ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಪಶ್ಚಿಮದಲ್ಲಿ ಮಾನ್ವಿ ಮತ್ತು ದೇವದುರ್ಗ ತಾಲೂಕುಗಳಿವೆ. ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿಯೇ ಭೂವಿಸ್ತಾರದಲ್ಲಿ ರಾಯಚೂರು ಜಿಲ್ಲೆಯು ಮೂರನೆಯ ಸ್ಥಾನವನ್ನು ಹಾಗೂ ಜನಸಂಖ್ಯೆಯಲ್ಲಿ ಹತ್ತನೆಯ ಸ್ಥಾನವನ್ನು ಹೊಂದಿದೆ.

೧೯೦೫ರವರೆಗೆ ರಾಯಚೂರು, ಪ್ರದೇಶ ರಾಯಚೂರು ಹಾಗೂ ಲಿಂಗಸೂಗೂರು ಜಿಲ್ಲೆಗಳಲ್ಲಿ ವಿಂಗಡಿಸಲ್ಪಟ್ಟಿದ್ದವು. ಆಗ ಇವು ರಾಯಚೂರು, ಯಾದಗಿರಿ, ದೇವದುರ್ಗ, ಮಾನ್ವಿ, ಆಲಂಪುರ ಮತ್ತು ಗದ್ವಾಲ ತಾಲೂಕುಗಳನ್ನು ಹೊಂದ್ದಿದ್ದು ನಂತರ ಈಗಿನ ತಾಲೂಕುಗಳನ್ನು ಸೇರಿಸಿ ಜಿಲ್ಲೆಯನ್ನು ರಚಿಸಲಾಯಿತು.[೫]

ರಾಯಚೂರು ತಾಲೂಕು ತುಂಗಭದ್ರಾ ಮತ್ತು ಕೃಷ್ಣಾನದಿಗಳನ್ನು ಹೊಂದಿದೆ. ತಾಲೂಕಿನ ಉತ್ತರದಲ್ಲಿ ಅರಸಗಿ ಗ್ರಾಮದ ಬಳಿ ಕೃಷ್ಣಾ ನದಿ ತಾಲೂಕನ್ನು ಪ್ರವೇಶಿಸಿ ಪೂರ್ವಾಭಿಮುಖವಾಗಿ ಹರಿದು ತಾಲೂಕನ್ನು ಬುಡದಿಪಾಡು ಗ್ರಾಮದ ಉತ್ತರದಲ್ಲಿ ಬಿಟ್ಟು ಆಂಧ್ರಪ್ರದೇಶವನ್ನು ಈ ತಾಲೂಕಿನಿಂದ ಬೇರ್ಪಡಿಸಿದೆ. ದಕ್ಷಿಣದಲ್ಲಿ ತುಂಗಭದ್ರಾ ನದಿ ತಟಕನೂರಿನ ದಕ್ಷಿಣ ಭಾಗದ ಬಳಿ ಹರಿದು ತಾಲೂಕನ್ನು ಸೇರಿಸಿದಂತೆ ಪೂರ್ವಾಭಿಮುಖವಾಗಿ ಹರಿದು ತಲಮಾರಿ ಗ್ರಾಮದ ಆಗ್ನೇಯದಲ್ಲಿ ತಾಲೂಕನ್ನು ಬಿಟ್ಟು ಆಂಧ್ರಪ್ರದೇಶವನ್ನು ಪ್ರವೇಶಿಸುವುದು ಹಾಗೂ ತಾಲೂಕು ಗಡಿಯಾಗಿ ಹರಿದು ಆಂಧ್ರಪ್ರದೇಶವನ್ನು ಬೇರ್ಪಡಿಸಿರುವುದು. ಕೃಷ್ಣಾನದಿಯ ಬಲದಂಡೆ ಮತ್ತು ತುಂಗಭದ್ರಾ ನದಿಯ ಎಡದಂಡೆಯ ಫಲವತ್ತಾದ ಪ್ರದೇಶ ಈ ತಾಲೂಕಿಗೆ ಸೇರಿದೆ. ತಾಲೂಕಿನಲ್ಲಿ ಸಣ್ಣ ಬೋಳು ಗುಡ್ಡಗಳು ಕಂಡುಬರುತ್ತವೆ. ಇವುಗಳಲ್ಲಿ ರಾಯಚೂರಿನ ದಕ್ಷಿಣಕ್ಕೆ ಸುಮಾರು

ಆರು ಕಿಮೀ ದೂರದಲ್ಲಿರುವ ಮಲಿಯಾಬಾದ ಗುಡ್ಡ ದೊಡ್ಡದಾಗಿದೆ. ವರ್ಷದಲ್ಲಿ ಬೇಸಿಗೆ ಕಾಲ ಬಿಟ್ಟು ಉಳಿದಂತೆ ಹವೆ ಸಹ್ಯವಾಗಿರುವುದು. ವಾರ್ಷಿಕ ಸರಾಸರಿ ೭೧೩.೩೦ ಮಿ.ಮಿ. ಈ ತಾಲೂಕಿನ ನದಿ ದಡಗಳ ಉದ್ದಕ್ಕೂ ಸ್ವಲ್ಪ ಕಾಡನ್ನು ಕಾಣಬಹುದು. ಈ ತಾಲೂಕಿನ ಸು. ೩೬೪ ಹೆಕ್ಟೇರ್ (೧೯೬೬-೬೭) ಕಾಡು ಇದೆ. ಕಪ್ಪುಮಣ್ಣಿನ ಈ ತಾಲೂಕಿನ ವ್ಯವಸಾಯ ನೀರಾವರಿಯ ಮೇಲೆ ಹೆಚ್ಚು ಅವಲಂಬಿತ. ಈ ತಾಲೂಕಿನಲ್ಲಿ ೧೯೭೯-೮೦ರಲ್ಲಿ ೭೨೯ ಕೆರೆಗಳು ಇದ್ದು ೩,೭೭೫ ಹೆಕ್ಟೇರುಗಳಿಗೆ ನೀರೊದಗಿಸುತ್ತಿದ್ದವು. ತುಂಗಭದ್ರಾ ಎಡದಂಡೆ ನಾಲೆ ಮತ್ತು ರಾಜೋಲ ಬಂಡೆ ಅಣೆಕಟ್ಟಿನ ಎಡನಾಲೆಗಳಿಂದ ತಾಲೂಕಿನ ವ್ಯವಸಾಯಕ್ಕೆ ನೀರೊದಗಿಸಿ ಹೆಚ್ಚು ಭೂಮಿ ಪ್ರದೇಶವನ್ನು ಬೇಸಾಯಕ್ಕೆ ಒಳಪಡಿಸಲಾಗಿದೆ. ಭತ್ತ, ಜೋಳ, ಸಜ್ಜೆ, ದ್ವಿದಳ ಧಾನ್ಯಗಳು, ಗೋಧಿ, ತೊಗರಿ, ಹೆಸರು, ಕಬ್ಬು, ಶೆಂಗಾ, ಹರಳು ಹತ್ತಿ ಈ ಎಲ್ಲಾ ಬೆಳೆಗಳನ್ನು ಈ ಭೂಮಿಯಲ್ಲಿ ಬೆಳೆಯಲಾಗುತ್ತದೆ. ಹೆಚ್ಚು ಭಾಗವು ಕಪ್ಪು ಮಣ್ಣಿನಿಂದ ಕೂಡಿದೆ. ಇದು ಹತ್ತಿಯನ್ನು ಬೆಳೆಯಲು ಸಹಾಯಕವಾಗುತ್ತದೆ.[೬]

ರಾಯಚೂರಿಗೆ ಮೊದಲು ರಾಚವೂರ ಪೆರ್ಮನರಾಚೂರು ಹಾಗೂ ರಾಚನೂರು ಎಂಬ ಹೆಸರಿತ್ತೆಂದು ಹೊಯ್ಸಳರ ಕಾಲದ ಕೆಲವು ಶಾಸನಗಳಿಂದ ತಿಳಿದುಬರುತ್ತದೆ ಬೇಲೂರು ತಾಲೂಕಿನ ೧೧೬೧ನೇ ತೇದಿಯ ಒಂದನೆಯ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಹುಲಿಕೆರೆ ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನನು ಗೆದ್ದುಕೊಂಡ ಸ್ಥಳಗಳಲ್ಲಿ ರಾಚವೂರು ಒಂದಾಗಿತ್ತು ಎಂದು ತಿಳಿಸಲಾಗಿದೆ. ಈ ಐತಿಹಾಸಿಕ ಹೆಸರು " ರಾಚೂರು " ಅನೇಕ ಬದಲಾವಣೆಗಳನ್ನು ಹೊಂದಿ "ರಾ" ಮತ್ತು "ಚೂರುಗಳ" ಮಧ್ಯೆ ಸೇರಿಕೊಂಡು ರಾಯಚೂರು ಆಗಿ ಮಾರ್ಪಾಡು ಆಗಿದೆ. ಹಿಂದಿ ಮತ್ತು ಉರ್ದು ಭಾಷೆಯ ಪ್ರಭಾವದಿಂದ ಈ ಸ್ಥಳಕ್ಕೆ ರಾಯಚೂರು ಎಂದು ಬಳಕೆಯಲ್ಲಿ ಬಂದಿತು.[೭]

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಕ್ರಿ.ಶ. ೧೧೬೮ರ ಎರಡನೆಯ ಬಲ್ಲಾಳನ ಕಾಲಕ್ಕೆ ಸಂಬಂಧಿಸಿದ ಹಾಟ್ನಾ ಶಾಸನವು ವಿಷ್ಣುವರ್ಧನನ ಶೌರ್ಯದಿಂದ ಗೆದ್ದುಕೊಂಡ ಕೋಟೆಗಳಲ್ಲಿ ಪೆರ್ಮನರಾಚವೂರು ಮುಖ್ಯವಾಗಿತ್ತೆಂದು ಹೇಳಲಾಗಿದೆ. ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ೧೧೮೩ ಇಸ್ವಿಯ ಹೊಯ್ಸಳರ ಹಿರೇಹಳಿ ಶಾಸನವು ರಾಜನೂರು ವಿಷ್ಣುವರ್ಧನನು ಗೆದ್ದುಕೊಂಡ ಸ್ಥಳಗಳಲ್ಲಿ ಒಂದಾಗಿತ್ತು ಎಂದು ವರ್ಣಿಸಿದೆ.

ಈ ಶಾಸನಗಳ ವಿವರಗಳಿಂದ ರಾಚವೂರು ಈಗಿನ ರಾಯಚೂರು ಆಗಿತ್ತೆಂದು ತಿಳಿದುಬಂದಿದೆ.[೮]

ರಾಚ ಇದನ್ನು ರಾಜ ಎಂಬ ಪದದಿಂದ ಆಯ್ದುಕೊಳ್ಳಲಾಗಿದೆ. ರಾಚ ಹಾಗೂ ಊರು ಸೇರಿ ರಾಚನೂರು ಎಂಬ ಹೆಸರು ಬಳಕೆಗೆ ಬಂದಿತು. ನಂತರ ರಾಜನೂರು ಎಂಬ ಅರ್ಥ ಪಡೆಯಿತು.

೧೩ನೇ ಶತಮಾನದಲ್ಲಿ ರಾಜವೂರು ಅಥವಾ ರಾಚನೂರು ಮೊಟಕುಗೊಂಡು ರಾಚೂರು ಎಂದು ಪ್ರಸಿದ್ಧಿಯನ್ನು ಪಡೆದಿದೆ. ಈ ವಿಷಯವು ಕಾಕತೀಯರ ದೊರೆ ಎರಡನೆಯ ಪ್ರತಾಪರುದ್ರನ ಕಾಲದ ರಾಯಚೂರು ಕೋಟೆಯ ಮೇಲೆ ಇರುವ ೧೨೯೪ನೆಯ ಶಾಸನದಿಂದ ಖಚಿತವಾಗಿದೆ. ಈ ಶಾಸನದಲ್ಲಿ ಈ ಸ್ಥಳಕ್ಕೆ ರಾಯಚೂರು ಎಂದು ಕರೆಯಲಾಗಿದೆ.[೯]

ರಾಯಚೂರು ಎಂಬ ಹೆಸರು ವಿಜಯನಗರ ಕಾಲದಲ್ಲಿಯೂ ಮುಂದುವರೆದಿತ್ತು. ಆಂಧ್ರಪ್ರದೇಶದ ಮೆಹಬೂಬನಗರ ಜಿಲ್ಲೆಯ ಆಲಂಪುರದ ಎರಡು ಶಾಸನಗಳು ಕೃಷ್ಣದೇವರಾಯನು ತನ್ನ ಉತ್ತರದ ದಿಗ್ವಿಜಯದಲ್ಲಿ ರಾಯಚೂರು ಕೋಟೆಯನ್ನು ಗೆದ್ದಕೊಂಡಿದ್ದನೆಂದು ತಿಳಿಸಿದೆ. ಈ ಐತಿಹಾಸಿಕ ಹೆಸರು 'ರಾಚೂರು' ಅನೇಕ ಬದಲಾವಣೆಗಳನ್ನು ಹೊಂದಿ 'ರಾ' ಮತ್ತು 'ಚೂರುಗಳ' ಮಧ್ಯ 'ಯ' ಸೇರಿಕೊಂಡು ರಾಯಚೂರು ಆಗಿ ಮಾರ್ಪಾಡು ಹೊಂದಿದೆ. ರಾಚಪುರವೇ ರಾಯಚೂರು ಆಗಿರಬೇಕೆಂದು ತಿಳಿಸಿದೆ. ತೆಲುಗಿನಲ್ಲಿ 'ರಾಯ' ಎಂದರೆ "ಕಲ್ಲು" ಎಂದು ಅರ್ಥವಿದೆ.[೧೦]

ರಾಯಚೂರು ಪ್ರದೇಶವು ಭೌಗೋಳಿಕವಾಗಿ ಸಮೃದ್ಧಿಯನ್ನು ಹೊಂದಿದ ಪ್ರದೇಶವಾಗಿದೆ. ಇಲ್ಲಿ ಪ್ರಮುಖವಾದ ಎರಡು ನದಿಗಳು ಇವೆ. ಫಲವತ್ತತ್ತೆಯಿಂದ ಕೂಡಿದ ಭೂಮಿಯನ್ನು ಹೊಂದಿದೆ. ಪೂರ್ವಭಾಗವು ಬೆಟ್ಟಗಳಿಂದ ಆವರಿಸಿದೆ. ಕೆಂಪು ಮತ್ತು ಕಪ್ಪು ಮಣ್ಣು ಇಲ್ಲಿದೆ. ರಾಯಚೂರಿನ ಪೂರ್ವ ಮತ್ತು ದಕ್ಷಿಣ ಭಾಗಕ್ಕೆ ಬೆಟ್ಟಗಳ ಸಾಲು ಇದೆ. ಈ ಬೆಟ್ಟಗಳು ಗ್ರಾನೈಟ್ ಶಿಲೆಯಿಂದ ಕೂಡಿದೆ.

ಈ ಊರ ಭೂಭಾಗದಲ್ಲಿ ದೊರೆಯಲು ಶಿಲಾಭಾಗಗಳೂ ಮತ್ತು ಕಲ್ಲಿನ ವಿಧಗಳು ಈ ರೀತಿಯಾಗಿವೆ. ಧಾರವಾರ ಸರಣಿಯ ಕಲ್ಲುಗಳು, ಬೆಣಚುಕಲ್ಲುಗಳು, ಕ್ವಾರ್ಟ್ಜ್, ಸಿಸ್ಟ

ಮತ್ತು ಟಾಲ್ಕ್ ಕಲ್ಲುಗಳು ಇವೆ. ಡೈಕ್ಸ್ ಮತ್ತು ಡೋಲರೇಟ್ ಎಪಿಡೋಲರೈಟ ಡೈಕ್ಸ್, ಕಲಾದಗಿಯ ಸರಣಿಗಳು, ಬೆನಚು ಕಲ್ಲುಗಳು ಮತ್ತು ಮರಳು ಶಿಲೆ, ಮಣ್ಣು ಕೂಡಾ ವಿವಧತೆಯಿಂದ ಕೂಡಿದೆ.[೧೧]

ಧಾರವಾರ ಸರಣಿಯ ಕಲ್ಲುಗಳು ಮಸ್ಕಿ ಮತ್ತು ರಾಯಚೂರಿನಲ್ಲಿವೆ. ಪೆನ್ನಿನ್‌ಸುಲಾರ ಉತ್ತರ ಮತ್ತು ದಕ್ಷಿಣ ಭಾಗದಲ್ಲಿ ಎರಡು ಬಗೆಯ ಶಿಲೆಗಳು ಇವೆ. ಪಶ್ಚಿಮ ಭಾಗದಲ್ಲಿ ಡೈಕ್ ಶಿಲೆಯು ದೊರೆಯುತ್ತದೆ. ಈ ಪ್ರದೇಶ ಖನಿಜಗಳ ಆಗರವೆಂದು ಹೇಳಬಹುದು. ಪ್ರಮುಖ ಲೋಹಗಳಾದ ಚಿನ್ನ, ತಾಮ್ರ ಮತ್ತು ಕಬ್ಬಿಣ ಹೇರಳವಾಗಿ ದೊರೆಯುವ ಸ್ಥಳವಾಗಿದೆ.[೧೨]

ಸಾಕಷ್ಟು ಮಳೆ ಬೀಳದ ಪ್ರದೇಶವಾಗಿದ್ದು, ಉಷ್ಣ ಹವಾಮಾನದಿಂದಾಗಿ ಸ್ವಲ್ಪ ಅರಣ್ಯ ಪ್ರದೇಶವಿದೆ. ಇಲ್ಲಿ ಕಾಡುಗಳಲ್ಲಿ, ಕಕ್ಕೆ, ಜಾಲೆ, ಹುಣಸೆ, ಹೊಂಗೆ, ಮುತ್ತುಗ, ದಿಂಡಿಂಗ, ಚಜ್ಜಲು, ಹುರಗ, ಹೊನ್ನೆ ಮತ್ತು ಸಿತಾಫಲ ಮುಂತಾದ ಮರಗಳು ಬೆಳೆಯುತ್ತವೆ. ೪೦೫ ಹೆಕ್ಟೇರ ಪ್ರದೇಶ ಅರಣ್ಯವನ್ನು ಹೊಂದಿದೆ.

ಈ ತಾಲೂಕಿನ ಹವಾಗುಣವು ಡಿಸೆಂಬರ್‌ನಲ್ಲಿ ಹೆಚ್ಚು ಚಳಿಯಿಂದ ಕೂಡಿರುತ್ತದೆ. ಫೆಬ್ರವರಿಯಿಂದ ಏಪ್ರಿಲ್ ತಿಂಗಳವರೆಗೆ ಬೇಸಿಗೆಕಾಲ ಇದ್ದು ಗರಿಷ್ಟ ಉಷ್ಣಾಂಶ ೩೮.೮° ಸೆಂ. (೧೦೩.೭° ಫಾ) ಮತ್ತು ಚಳಿಗಾಲದಲ್ಲಿ[೧೩] ೧೭.೭°ಸೆ. ಉಷ್ಣಾಂಶ ಇರುತ್ತದೆ. ಜೂನ್‌ದಿಂದ ಮಳೆ ಪ್ರಾರಂಭವಾಗಿ ವಾರ್ಷಿಕ ಮಳೆಯು ಸರಾಸರಿ ೬೩೧ ಮಿ.ಮೀ. ಇರುತ್ತದೆ.

**ರಾಯಚೂರಿನ ಪ್ರಾಗಿತಿಹಾಸ**

ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಮುಖ್ಯ ವಿಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು ಅಕ್ಷರ ಜ್ಞಾನವಿಲ್ಲದ ಹಂತ ಅಥವಾ ಪ್ರಾಗಿತಿಹಾಸವೆಂದು ಕರೆಯಲಾಗಿದ್ದು, ಎರಡನೆಯದು ಅಕ್ಷರಜ್ಞಾನವಿದ್ದ ಕಾಲ ಅಥವಾ ಬರವಣಿಗೆಯ ಕಾಲವೆಂದು ಕರೆಯಲಾಗಿದು, ಇದನ್ನು ಇತಿಹಾಸಕಾಲವೆಂದು ಕರೆಯಲಾಗಿದೆ.

ಪ್ರಾಗಿತಿಹಾಸದ ಕಾಲವನ್ನು ಇಂದಿಗೆ ಸುಮಾರು ೫ ಲಕ್ಷ ವರ್ಷಗಳಿಂದ ಕ್ರಿಸ್ತಶಕದ ಆರಂಭಕಾಲದವರೆಗೆ ಇತ್ತೆಂದು ಗಣಿಸಲಾಗಿದೆ. ಈ ಕಾಲವನ್ನು ಆಗ ನಿತ್ಯ ಬಳಕೆಯ ವಸ್ತುವಿನ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹಯುಗ ಸಂಸ್ಕೃತಿ ಎಂದು ವಿಭಾಗಿಸಲಾಗಿದೆ. ಶಿಲಾಯುಗ ಸಂಸ್ಕೃತಿಯನ್ನು ಸೂಕ್ಷ್ಮಶಿಲಾಯುಗ ಮತ್ತು ನೂತನ ಶಿಲಾಯುಗವೆಂದು ವಿಭಾಗಿಸಿದೆ. ಹಳೆಯ ಶಿಲಾಯುಗವನ್ನು ಮೂರು ವಿಧಗಳಾಗಿ ವಿಂಗಡಿಸಿದೆ.

ರಾಯಚೂರು ಕೃಷ್ಣಾ-ತುಂಗಭದ್ರಾ ನದಿಗಳ ಮಧ್ಯ ಇರುವ ಈ ಊರು ಫಲವತ್ತತೆಯಿಂದ ಕೂಡಿದೆ. ಆದಿಮಾನವನು ವಾಸಿಸಿವ ಯೋಗ್ಯವಾದ ಸ್ಥಳವಾಗಿದೆ, ಎಂಬುದಕ್ಕೆ ರಾಯಚೂರಿನಲ್ಲಿ ಎಲ್ಲಾ ಹಂತದ ಪ್ರಾಗಿತಿಹಾಸ ಅವಶೇಷಗಳು ದೊರೆತಿವೆ. ರಾಬರ್ಟ್ ಬ್ರೂಸಫುಟರವರು ೧೮೭೦-೧೮೮೦ರಲ್ಲಿ ರಾಯಚೂರಿನ ಭೂಭಾಗವನ್ನು ಶೋಧನೆ ಮಾಡಿ ಅನೇಕ ನೆಲೆಗಳನ್ನು ಗುರುತಿಸಿದರು. ರಾಯಚೂರಿನಲ್ಲಿ ೮ ಪ್ರಾಗಿತಿಹಾಸಿಕ ನೆಲೆಗಳಿವೆ.[೧೫]

ಅಕನೂರು, ಕರೆಕಲ್, ಗರ್ಜಾಪುರ, ತಲಮಾರಿ, ದೇವಸುಗೂರು, ಯದ್ಲಾಪುರ, ರಾಜಲಬಂಡಾ, ತಟಕನೂರಗಳಲ್ಲಿ ವಿವಿಧ ಹಂತದ ಪ್ರಾಗಿತಿಹಾಸದ ಅವಶೇಷಗಳು ದೊರೆತಿವೆ. ಅಕನೂರು ಗ್ರಾಮದಲ್ಲಿ ಶಿಲಾತಾಮ್ರಯುಗದ ಅವಶೇಷಗಳು ಕಂಡುಬಂದಿವೆ. ಅದುರಿನ ಜ್ಞಾನ ಲೋಹವನ್ನಾಗಿ ಪರಿವರ್ತಿಸುವುದು, ಆಯುಧಗಳ ತಯಾರಿಕೆ ಅವಶೇಷಗಳು ಕಂಡುಬಂದಿವೆ. ಕರೆಕಲ್‌ನಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆಗಳು ಕಂಡುಬಂದಿದೆ. ಬೃಹತ್‌ಶಿಲಾಯುಗ ಸಂಸ್ಕೃತಿಯಲ್ಲಿ ಬೃಹತ್‌ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರು. ಈ ಸಂಸ್ಕೃತಿಯ ಜನರು ಕಬ್ಬಿಣವನ್ನು ಬಳಸುತ್ತಿದ್ದರು ಮತ್ತು ಶವಸಂಸ್ಕಾರ ಪದ್ಧತಿಯು ಪ್ರಮುಖವಾಗಿ ಕಂಡುಬರುತ್ತದೆ. ಗುರ್ಜಾಪುರ ಕೂಡಾ ಬೃಹತ್‌ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಯಾಗಿದೆ. ತಲಮಾರಿಯಲ್ಲಿ ಬೂದಿದಿಬ್ಬ ಅವಶೇಷವು ಕಂಡುಬಂದಿದೆ. ದೇವಸುಗೂರು ಯದ್ಲಾಪುರ, ರಾಜಲಬಂಡಾ, ತಟಕನೂರುಗಳಲ್ಲಿ ವಿವಿಧ ಸಂಸ್ಕೃತಿಯ ನೆಲೆಗಳು ಕಂಡುಬಂದಿದೆ.

ಈ ಎಲ್ಲಾ ನೆಲೆಗಳ ಶೋಧಗಳಿಂದ ರಾಯಚೂರು ಭಾಗವು ಆದಿಮಾನವನ ವಾಸಸ್ಥಳವಾಗಿತ್ತು ಎಂಬುದಕ್ಕೆ ಸಂಶಯವಿಲ್ಲ ಇದು ಇತಿಹಾಸಪೂರ್ವದಲ್ಲಿ ಮಹತ್ವದ ಕೇಂದ್ರವಾಗಿತ್ತು ಎಂದು ಶೋಧನೆಗಳ ಮೂಲಕ ಸಾಬೀತುಪಡಿಸಲಾಗಿದೆ.[೧೬]

## ೨.೨ ಚಾರಿತ್ರಿಕ ಹಿನ್ನೆಲೆ

ಚಾರಿತ್ರಿಕ ದೃಷ್ಟಿಯಿಂದ ರಾಯಚೂರು ಪ್ರಸಿದ್ಧಿಯನ್ನು ಪಡೆದಿದೆ. ಕರ್ನಾಟಕದ ಚರಿತ್ರೆಯಲ್ಲಿ ವಹಿಸಿದ ಪಾತ್ರವು ಸಂಸ್ಮರಣೀಯವಾಗಿದೆ. ರಾಯಚೂರಿನ ಚಾರಿತ್ರಿಕ ಹಿನ್ನೆಲೆಯು ಹಳೆಯ ಶಿಲಾಯುಗದ ಸಂಸ್ಕೃತಿಯಿಂದ ಪ್ರಾರಂಭವಾಗಿ ಕರ್ನಾಟಕದ ಎಲ್ಲಾ ಮುಖ್ಯ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತೆಂದು ತಿಳಿದುಬರುತ್ತದೆ.

ರಾಯಚೂರಿನ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗಿದೆ. ಈ ಜಿಲ್ಲೆಯಲ್ಲಿ ಅಶೋಕನ ಶಾಸನವು ಲಿಂಗಸುಗೂರು ತಾಲೂಕಿನ ಮಸ್ಕಿಯಲ್ಲಿ ದೊರೆತಿವೆ. "ದೇವನಾಂಪ್ರಿಯ ಪ್ರಿಯದರ್ಶಿ" ಎಂಬ ಹೆಸರನ್ನು ಅಶೋಕ ಚಕ್ರಚರ್ತಿ ಹೊಂದಿದ್ದನೆಂದು ತಿಳಿದುಬರುತ್ತದೆ. ಈ ಜಿಲ್ಲೆಯ ಭಾಗಗಳು ಅಶೋಕ ಚಕ್ರವರ್ತಿಯ ಆಳ್ವಿಕೆಗೆ ಒಳಪಟ್ಟಿತೆಂಬುದು ಹೆಮ್ಮೆಯ ವಿಷಯ.[೧೭]

ಕದಂಬರು ಕ್ರಿಸ್ತಶಕ ಐದನೆಯ ಶತಮಾನದಲ್ಲಿ ರಾಯಚೂರಿನ ಈ ಪ್ರದೇಶವು ಕದಂಬರ ಆಡಳಿತಕ್ಕೆ ಒಳಪಟ್ಟಿತೆಂದು ಶಾಸನಗಳಿಂದ ತಿಳಿದುಬಂದಿದೆ. ಕರಡಿಕಲ್ ಶಾಸನವು ರಾಯಚೂರಿನ ಭಾಗಗಳಾದ ಮುದಗಲ್, ಕರಡಿಕಲ್ ಕದಂಬರ ಆಡಳಿತಕ್ಕೆ ಸಂಬಂಧಿಸಿದ್ದನ್ನು ತಿಳಿಸುತ್ತದೆ. ಬಾದಾಮಿ ಚಾಳುಕ್ಯರು ರಾಯಚೂರಿನ ಮೇಲೆ ಆಡಳಿತವನ್ನು ನಡೆಸಿದರು.

ರಾಷ್ಟ್ರಕೂಟರು ಕರ್ನಾಟಕದಲ್ಲಿ ಸಾರ್ವಭೌಮ ಅಧಿಕಾರವನ್ನು ಹೊಂದಿದ್ದರು. ಅಮೋಘವರ್ಷ ನೃಪತುಂಗನು ರಾಷ್ಟ್ರಕೂಟರ ಪ್ರಸಿದ್ಧ ದೊರೆ. ಅವನ ಆಶ್ರಯದಲ್ಲಿ ಶ್ರೀವಿಜಯ ಎಂಬ ಕವಿಯು ಪ್ರಸಿದ್ಧವಾದ "ಕವಿರಾಜ ಮಾರ್ಗ" ಎಂಬ ಗ್ರಂಥವನ್ನು ರಚಿಸಿದನು. ಈ ಗ್ರಂಥವು ರಾಯಚೂರು ಮತ್ತು ಕೊಪ್ಪಳವನ್ನು ಉಲ್ಲೇಖಿಸಿದ್ದು ಕೊಪ್ಪಳವನ್ನು ಕೊಪಣ ನಗರವೆಂದು ವರ್ಣಿಸಿದೆ. ಕ್ರಿ.ಶ. ೯೭೩ರ ಸುಮಾರಿಗೆ ರಾಷ್ಟ್ರಕೂಟರ ಕೊನೆಯ ಅರಸನಾದ ಎರಡನೆಯ ಕರ್ಕನನ್ನು ಸೋಲಿಸಿ ಕಲ್ಯಾಣ

ಚಾಳುಕ್ಯರ ಎರಡನೆಯ ತೈಲನು ಕಲ್ಯಾಣದಲ್ಲಿ ತನ್ನ ಸಾರ್ವಭೌಮ ಅಧಿಕಾರವನ್ನು ಸ್ಥಾಪಿಸಿದರು. ಕಲ್ಯಾಣ ಚಾಳುಕ್ಯರ ಅನೇಕ ಶಾಸನಗಳು ರಾಯಚೂರು ಜಿಲ್ಲೆಯಲ್ಲಿ ದೊರೆತಿವೆ. ಸೋಮೇಶ್ವರನ ಶಾಸನಗಳು ಮಾನ್ವಿಯಲ್ಲಿ ಕಲ್ಯಾಣ ಚಾಳುಕ್ಯರ ಪ್ರಸಿದ್ಧ ಅರಸನಾದ ಆರನೇಯ ವಿಕ್ರಮಾದಿತ್ಯನ ಶಾಸನಗಳು ರಾಯಚೂರಿನ ಜಿಲ್ಲೆಯ ಕಲ್ಲೂರು, ಹಳಗುಡಿ, ಕರಡಿಕಲ್ ಹಾಗೂ ಗಬ್ಬೂರುಗಳಲ್ಲಿ ದೊರೆತಿವೆ.[೧೮]

ಕಲ್ಯಾಣ ಚಾಳುಕ್ಯರ ಕೊನೆಯ ಅರಸನಾದ ೩ನೆಯ ತೈಲಪನು ವಾರಂಗಲ್ಲಿನ ಕಾಕತೀಯರ ಪ್ರೋಲನು ಸರೆಹಿಡಿದಿದ್ದಾಗ ಚಾಳುಕ್ಯರ ಸಾಮಂತನಾದ ಕಲಚೂರಿ ಬಿಜ್ಜಳನು ರಾಯಚೂರು ಪ್ರದೇಶವನ್ನು ಆಳಿದನು. ಅವನ ಮೂರು ಶಾಸನಗಳು ಕುಕನೂರಿಲ್ಲಿ ದೊರೆತಿವೆ.

ದೇವಗಿರಿಯಿಂದ ಯಾದವರು ಸಹ ಆಳಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಯಾದವ ಅರಸನಾದ ಸಿಂಘಣನ ನಾಲ್ಕು ಶಾಸನಗಳು ರಾಯಚೂರು ಜಿಲ್ಲೆಯಲ್ಲಿ ಕಂಡುಬಂದಿದೆ. ರಾಯಚೂರು ವಾರಂಗಲ್ಲಿನ ಕಾಕತೀಯ ಆಡಳಿತಕ್ಕೆ ಒಳಪಟ್ಟಿತ್ತು. ಕಾಕತೀಯರ ಅರಸು ಎರಡನೆಯ ಪ್ರತಾಪರುದ್ರನ ಕಾಲಕ್ಕೆ ಸಂಬಂಧಿಸಿದ. ಕ್ರಿ.ಶ. ೧೨೯೪ನೆಯ ಇಸ್ವಿಯ ಶಾಸನವು ರಾಯಚೂರಿನ ಕೋಟೆಯ ಗೋಡೆ ಮೇಲಿದೆ. ಈ ಶಾಸನವು ರಾಯಚೂರು ಭಾಗದ ಆಡಳಿತ ಹಾಗೂ ಸೈನಿಕ ಆಧಿಕಾರಿಯಾದ ಗೋನಗನ್ನಯ್ಯ ರೆಡ್ಡಿಯು ರಾಯಚೂರು ಕೋಟೆಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ.

ರಾಯಚೂರಿನ ಇತಿಹಾಸದಲ್ಲಿ ಇನ್ನೊಂದು ಮುಖ್ಯ ಘಟನೆ ಎಂದರೆ ವಿಜಯನಗರ ಕಾಲದಲ್ಲಿ ಮತ್ತು ಬಹಮನಿ ಅರಸರಿಗೆ ಫಲವತ್ತಾದ ರಾಯಚೂರು ಪ್ರದೇಶ ಆಡಳಿತದ ಅಧಿಪತ್ಯಕ್ಕಾಗಿ ಅನೇಕ ಯುದ್ಧಗಳನ್ನು ಮಾಡಿದ್ದು. ರಾಯಚೂರು ಯುದ್ಧ ಭೂಮಿಯಾಗಿ ಮಾರ್ಪಟ್ಟಿತು. ಕ್ರಿ.ಶ. ೧೫೨೦ರಲ್ಲಿ ವಿಜಯನಗರದ ಅರಸನಾದ ಕೃಷ್ಣದೇವರಾಯನು ಇಸ್ಮಾಯಿಲ್ ಆದಿಲ್‌ಷಾಹನನ್ನು ಸೋಲಿಸಿ ರಾಯಚೂರು ಕೊಟೆಯನ್ನು ವಶಪಡಿಸಿಕೊಂಡನು.

ವಿಜಯನಗರದ ಆಡಳಿತವು ಸಂಸ್ಕೃತಿ ಮತ್ತು ಸಾಹಿತ್ಯದ ಬೆಳವಣಿಗೆಗೆ ಪ್ರಸಿದ್ಧಿಯನ್ನು ಪಡೆದಿತ್ತು. ಕೃಷ್ಣದೇವರಾಯನ ನಂತರ ರಾಯಚೂರು ಪ್ರದೇಶವು ಮತ್ತೆ

ವಿಜಾಪುರದ ಸುಲ್ತಾನರ ವಶಕ್ಕೆ ಬಂದಿತ್ತು. ಮುಂದೆ ವಿಜಾಪುರದ ಹಾಗೂ ಗೋಲ್ಕಂಡದ ರಾಜ್ಯಗಳು ಮೊಘಲರ ವಶವಾಯಿತು. ರಾಯಚೂರು ಸಹ ಅವರ ಅಧಿಕಾರಕ್ಕೆ ಸೇರಿತು. ಮೊಘಲ್ ಸಾಮ್ರಾಜ್ಯದ ಅವನತಿಯ ಲಾಭ ಪಡೆದು ದಕ್ಷಿಣದಲ್ಲಿ ಮೊಘಲರ ಸುಬೇದಾರನಾದ ಅಸಫ್ ನಿಜಾಮ್-ಉಲ್-ಮುಲ್ಕನು ೧೭೨೪ರಲ್ಲಿ ಹೈದ್ರಾಬಾದಿನಲ್ಲಿ ತನ್ನ ಸ್ವತಂತ್ರ ರಾಜ್ಯವನ್ನು ಮುಂದುವರೆಸಿದನು. ಈ ಮದ್ಯೆ ರಾಯಚೂರು ಪ್ರದೇಶವು ಕೆಲವು ಕಾಲ ಟಿಪ್ಪುಸುಲ್ತಾನನ ವಶವಾಗಿತ್ತು. ೧೭೯೯ರಲ್ಲಿ ನಾಲ್ಕನೆಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತು ಶರಣಾದನು. ಮೈಸೂರು ರಾಜ್ಯದ ಅನೇಕ ಭಾಗಗಳನ್ನು ಬ್ರಿಟಿಷರು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು.[೧೯]

ಆಸಫ್‌ಜಾಹಿ ಮನೆತನದ ಐದನೆಯ ನಿಜಾಮನಾದ ಅಸಫ್ ಉದ್ದಾಲನು ದಕ್ಷ ಅರಸನಾಗಿದ್ದನು. ಈ ನಿಜಾಮ ಹಾಗೂ ಇವನ ಪ್ರಧಾನ ಮಂತ್ರಿಯಾಗಿದ್ದ ಮೊದಲನೆಯ ಸಾಲಾರಜಂಗನು ಬ್ರಿಟಿಷರ ಮಿತ್ರರಾಗಿದ್ದು ಅವರೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ್ದನು. ೧೮೫೭ರ ಸಿಪಾಯಿ ದಂಗೆಯ ಕಾಲದಲ್ಲಿ ಬ್ರಿಟಿಷರಿಗೆ ಸಹಾಯ ಸಲ್ಲಿಸಿದ್ದನು. ಅದಕ್ಕೆ ಪ್ರತಿಯಾಗಿ ಬ್ರಿಟಿಷರು ೧೮೬೦ರ ಒಪ್ಪಂದದ ಪ್ರಕಾರ ಉಸ್ಮನಾಬಾದ ಹಾಗೂ ರಾಯಚೂರು ದೋ-ಆಬ್ ಪ್ರದೇಶವನ್ನು ಹೈದ್ರಾಬಾದ್ ರಾಜ್ಯದಲ್ಲಿ ಸೇರಿಸಿದ್ದರು. ಇದು ನಿಜಾಮರ ಆಡಳಿತಕ್ಕೆ ಒಳಪಟ್ಟಿತು. ರಾಯಚೂರು ಜಿಲ್ಲೆಯನ್ನು ವಿಂಗಡಿಸಿ ಕೊಪ್ಪಳ ಜಿಲ್ಲೆಯನ್ನು ಕೊಪ್ಪಳ ಗಂಗಾವತಿ, ಕುಷ್ಟಗಿ ಮತ್ತು ಯಲಬುರ್ಗಾ ತಾಲೂಕುಗಳನ್ನು ಒಳಗೊಂಡಂತೆ ಇದನ್ನು ರಚಿಸಲಾಯಿತು.[೨೦]

**ಅಡಿಟಿಪ್ಪಣೆಗಳು**

೧. ಕನ್ನಡ **ವಿಷಯ ವಿಶ್ವಕೋಶ**, ಸಂ. ೨, ಪು. ೮೨೫

೨. **ಮೈಸೂರು ಗ್ಯಾಜಿಟಿಯರ**, ರಾಯಚೂರು ಜಿಲ್ಲೆ, ಪು. ೧

೩. ಚೆನ್ನಬಸವ ಹಿರೇಮಠ, ಎಡದೊರೆನಾಡು, ಪು, ೧-೨; ವಾಸುದೇವನ ಸಿ.ಎಸ್, 'ಎಡೆನಾಡು ಒಂದು ಆಡಳಿತ ವಿಭಾಗ; ಇತಿಹಾಸ ದರ್ಶನ, ಸಂ, ೧೨, ಪು. ೧೫೭-

೧೬೦, ಚೆನ್ನಬಸವ ಹಿರೇಮಠ, 'ಎಡದೊರೆ ಪದದ ನಿಷ್ಪತ್ತಿ, ',ಇತಿಹಾಸ ದರ್ಶನ, ಸಂ, ೧೫. ಪು. ೧೯೭–೧೯೮.

೪. **ಮೈಸೂರು ಗ್ಯಾಜಿಟಿಯರ,** ರಾಯಚೂರು ಜಿಲ್ಲೆ, ಪು. ೩

೫. ಅದೇ, ಪು. ೪

೬. ಕನ್ನಡ ವಿಷಯ ವಿಶ್ವಕೋಶ, ಸಂ. ೨, ಪು. ೮೨೬

೭. **ಅದೇ,** ಪು. ೮೨೪

೮. **ಅದೇ,** ಪು ೮೨೭

೯. ಬಸವರಾಜ ಸಬರದ, **ರಾಯಚೂರು ಜಿಲ್ಲಾ ದರ್ಶನ,** ಪು. ೨.

೧೦. ಅದೇ, ಪು ೩

೧೧. **ಮೈಸೂರು ಗ್ಯಾಜಿಟಿಯರ,** ರಾಯಚೂರು ಜಿಲ್ಲೆ, ಪು. ೧೩.

೧೨. **ಅದೇ,** ಪು. ೧೩

೧೩. ಅದೇ, ಪು. ೨೦

೧೪. ಅದೇ, ಪು.೨೧

೧೫. ಶಿವತಾರಕ ಕೆ.ಬಿ., **ಕರ್ನಾಟಕದ ಪುರಾತತ್ವ ನೆಲೆಗಳು,** ಪು.೧

೧೬. ಶಿವತಾರಕ ಕೆ.ಬಿ., **ಪೂರ್ವೋಕ್ತ,** ಪು. ೫೯೪–೫೯೫

೧೭. ಬಸವರಾಜ ಸಬರದ, **ಪೂರ್ವೋಕ್ತ,** ಪು. ೪

೧೮. **ಅದೇ,** ಪು.೫

೧೯. **ಅದೇ,** ಪು.೬

೨೦. **ಅದೇ,** ಪು.೭

## ದೇವಾಲಯಗಳ ಉಗಮ ಮತ್ತು ವಿಕಾಸ

ದೇವಾಲಯಗಳ ಅಧ್ಯಯನವು ಚರಿತ್ರೆಯ ರಚನೆಯಲ್ಲಿ ಬಹುಮುಖ್ಯ ಪಾತ್ರವಹಿಸುತ್ತವೆ. ದೇಶದ ಒಂದು ಸಂಸ್ಕೃತಿಯನ್ನು ಅಭಿವ್ಯಕ್ತಗೊಳಿಸುವಲ್ಲಿ ಸಹಕಾರಿಯಾಗಿವೆ. ಈ ನಿಟ್ಟಿನಲ್ಲಿ ಭಾರತ ಪ್ರಾಚೀನ ಕಾಲದಿಂದಲೂ ಉನ್ನತ ಪರಂಪರೆಯನ್ನು ಹೂಂದಿದ ದೇಶವಾಗಿದೆ. ದೈವತ್ವದಲ್ಲಿ ನಂಬಿಕೆಯನ್ನು ಹೊಂದಿದ ಭಾರತೀಯರು ವಿವಿಧ ಧರ್ಮಗಳಿಗೆ ಸೇರಿದ ವೈವಿಧ್ಯಮಯವಾದ ದೇವಾಲಯಗಳನ್ನು ನಿರ್ಮಾಣ ಮಾಡಿದ್ದು ಅಂಥಹ ದೇವಾಲಯಗಳು ಇಂದಿಗೂ ನಮ್ಮ ಮುಂದಿವೆ. ಜಗತ್ತಿನಲ್ಲಿ ಇನ್ನುಳಿದ ದೇಶಗಳಿಗಿಂತ ಅಧಿಕ ಸಂಖ್ಯೆಯ ದೇವಾಲಯಗಳು ಭಾರತದಲ್ಲಿವೆ. ಈ ದೇವಾಲಯಗಳು ಪ್ರಾಚೀನ ಕಾಲದ ಧಾರ್ಮಿಕ ಸಾಂಸ್ಕೃತಿಕ ಮತ್ತು ಕಲಾಕ್ಷೇತ್ರದ ಪ್ರತ್ಯಕ್ಷ ಮತ್ತು ಪರೋಕ್ಷ ಬಿಂಬಗಳಾಗಿ ನಮ್ಮ ಮುಂದಿವೆ.

ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ ಮತ್ತು ನಂಬಿಕೆಗಳ ಪ್ರತೀಕಗಳಾಗಿವೆ, “ಅಲೆಮಾರಿಯಾಗಿದ್ದ ಮಾನವ ಒಂದು ಕಡೆಗೆ ನೆಲೆಯಾಗಿ ನಿಲ್ಲಬೇಕೆಂದೂ, ಒಂದು ಸುರಕ್ಷಿತವಾದ ಸ್ಥಳದಲ್ಲಿ ವಾಸಿಸಬೇಕೆಂದು ಎಂದಿನಿಂದ ಬಯಸಿದನೋ, ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ.

ಸುತ್ತುಗೋಡೆ ಅದರ ಮೇಲೆ ವಿವಿಧ ಆಕಾರದ ಮುಚ್ಚಿಗೆ, ಮುಂಭಾಗದಲ್ಲಿ ಬಾಗಿಲು, ಅದರ ಮೇಲೆ ಗಾಳಿ ಬೆಳಕು ಬರಲು ಕಮಾನು ತೆರವು ಹೀಗೆ ಅವನ ಮನೆಯು ರೂಪುಗೊಂಡಿತು ಇದು ವಾಸ್ತುಶಿಲ್ಪದ ಪ್ರಾಥಮಿಕ ಹೆಜ್ಜೆ ಮಾನವನು ಪ್ರಕೃತಿಯೊಡನೆ ಬದುಕ ಬೇಕಾದಾಗ ಪ್ರಕೃತಿಯ ವಿಸ್ಮಯಗಳಾದ ಗಾಳಿ, ಮಳೆ, ಗುಡುಗು, ಸಿಡಿಲು, ಕಾಡ್ಗಿಚ್ಚು ಮಾದಲಾದವು ಅವನಲ್ಲಿ ಭೀತಿ ಹುಟ್ಟಿಸಿದವು ಇವುಗಳಿಂದ ಅವನು ನಿಸರ್ಗದಲ್ಲಿ ಎಲ್ಲಕ್ಕೂ ಮಿಗಿಲಾದ ಅದ್ಭುತವಾದ ಶಕ್ತಿ ಇದೆ ಎಂದು ಅರಿತುಕೊಂಡಿನು. ತನ್ನ ಕೆಲಸ ಕಾರ್ಯಗಳಿಗೆ ಪೂರಕವಾಗಿ ಬೆಂಬಲ ನೀಡಬಹುದಾದ ಈ ಶಕ್ತಿಗೆ ಅವನು ಮೂರ್ತಿರೂಪ ನೀಡಲು ಪ್ರಾರಂಭಿಸಿದನು. ಅದರ ರಕ್ಷಣೆಗೆ ಭೂಮಿಯ ಮೇಲೆ ಕಟ್ಟಡವನ್ನು ಕಟ್ಟಿದನು. ತನಗಾಗಿ ನಿರ್ಮಿಸಿಕೊಂಡ ಮನೆ ಗೃಹವಾಸ್ತುಶಿಲ್ಪ ಎನಿಸಿದರೆ, ತನ್ನ ದೇವರಿಗಾಗಿ ಕಟ್ಟಿದ್ದು 'ಧಾರ್ಮಿಕ ವಾಸ್ತುಶಿಲ್ಪ 'ಅಥವಾ' ದೇವಾಲಯ ವಾಸ್ತುಶಿಲ್ಪ' ಎಂದು ಕರೆಯಲಾಯಿತು. ಭೂಮಿಯನ್ನೇ ಒಂದು ವಸ್ತುವೆಂದು ಪರಿಗಣಿಸಿ ಅದರ ಮೇಲೆ ಕಟ್ಟಲ್ಪಟ್ಟ ಗೃಹ, ಗುಡಿ, ದೇವಾಲಯ, ದೇವಗಾರ, ದೇವಳ ಇವುಗಳನ್ನು ವಾಸ್ತುಗಳೆಂದು ಕರೆಯಲಾಗಿದೆ.[೧]

ವಾಸ್ತುಶಿಲ್ಪವನ್ನು ಕುರಿತು ಹಲವು ಪ್ರಾಚೀನ ಶಾಸ್ತ್ರಗ್ರಂಥಗಳು ಹಾಗೂ ವಿದ್ವಾಂಸರು ತಮ್ಮ ವಿಚಾರಗಳನ್ನು ಮಂಡಿಸಿರುವರು. **ಬೃಹತ್‌ಸಂಹಿತೆ, ಮಾನಸಾರ, ಮಯಮತ, ಸಮರಾಂಗಣ, ಸೂತ್ರಧಾರ, ಕಾಶ್ಯಪ ಶಿಲ್ಪ, ಅಗಸ್ತ್ಯ ಸಕಲಾಧಿಕಾರ, ಅಪರಾಜಿತ ಪೃಚ್ಛಾಗ ಪ್ರಸಾದ ಮಂಡನ, ರೂಪಮಂಡನ, ಅಭಿಲಾಷಿತಾರ್ಥಚಿಂತಾಮಣಿ, ತಂತ್ರಸಮುಚ್ಚಯ,** ಮುಂತಾದವುಗಳು ಪ್ರಮುಖವಾಗಿವೆ. [೨]ಮಯಮತ ಗ್ರಂಥವು 'ವಾಸ್ತು' ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ. ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎಂದು ಗುರುತಿಸಲಾಗುತ್ತದೆ. ಪ್ರಸಾದ, ಹರ್ಮ್ಯ, ಸೌಧ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎನಿಸುತ್ತದೆ. ಆದ್ದರಿಂದ ವಾಸ್ತು ಎಂದಲ್ಲಿ ವಸತಿಯೋಗ್ಯ ಭೂಮಿ ಮತ್ತು ಆ ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನೂ ಇದು ಒಳಗೊಳ್ಳುತ್ತದೆ.[೩] ಗರುಡ ಪುರಾಣದ ಒಂದು ಶ್ಲೋಕವು ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು ಮತ್ತು ಮಠಗಳು ಸಹ ವಾಸ್ತುಗಳೆದು ಹೇಳಿದೆ. [೪]ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ, ಕಲ್ಲು, ಮರ ಹಾಗೂ ಕಬ್ಬಿಣಗಳನ್ನು ಸಹ ವಿಶ್ವಕರ್ಮ ವಾಸ್ತುಶಾಸ್ತ್ರದಲ್ಲಿ ವಾಸ್ತುಗಳೆಂದೇ ಪರಿಗಣಿತವಾಗಿದೆ, ದೇವಾಲಯ ಅರಮನೆ ಅಥವಾ

ರಾಜಗೃಹ, ದೇವತಾಮೂರ್ತಿಗಳು ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ ಮುಂತಾದವುಗಳು ರಚನೆಯನ್ನು **ಶುಕ್ರನೀತಿ** ಗ್ರಂಥವು ವಾಸ್ತುಶಿಲ್ಪ ಶಾಸ್ತ್ರದಡಿಯಲ್ಲಿ ಗುರುತಿಸಿದೆ. ಒಟ್ಟಾರೆ ವಾಸ್ತುಶಿಲ್ಪವು ನಾಗರೀಕತೆಯನ್ನು ರೂಪಿಸುವ ಪ್ರತೀಕಗಳಾಗಿವೆ.

ವಾಸ್ತುಶಿಲ್ಪ ಎಂಬ ಶಬ್ದ ಅಥವಾ ಪದಕ್ಕೆ ವಿಶಾಲವಾದ ಅರ್ಥ ಹಾಗೂ ವ್ಯಾಪ್ತಿ ಇದ್ದರೂ ಸಾಮಾನ್ಯವಾಗಿ ದೇವಾಲಯಗಳು ಮಾತ್ರ ವಾಸ್ತು ಶಿಲ್ಪಗಳಾಗಿ ಪರಿಗಣಿತವಾಗುತ್ತದೆ. ಸ್ತೂಪ, ಚೈತ್ಯ, ವಿಹಾರ, ಬಸದಿ, ಮಸೀದಿ, ಚರ್ಚು, ಕೆರೆಕಟ್ಟೆ, ಬುರುಜು, ಕೋಟೆ ಹಾಗೂ ಮನೆಗಳಂತಹ ಎಲ್ಲಾ ರಚನೆಗಳು ವಾಸ್ತುಶಿಲ್ಪಗಳೇ ಆಗಿವೆ. ಆದರೆ ಅಧ್ಯಯನದ ಅನುಕೂಲಕ್ಕಾಗಿ, ವಾಸ್ತುಶಿಲ್ಪವನ್ನು ದೇವಾಲಯಕ್ಕೂ ಹಾಗೂ 'ಶಿಲ್ಪ' ಎಂಬುದನ್ನು ಮೂರ್ತಿಗಳಿಗೆ ಅನ್ವಯವಾಗುವಂತೆ ಅನುಕ್ರಮದಲ್ಲಿ ಬಳಸುತ್ತಾರೆ. ವಾಸ್ತು ಶಿಲ್ಪವನ್ನು ಶೌಕಿಕ, ಧಾರ್ಮಿಕ ಮತ್ತು ರಕ್ಷಣಾವಾಸ್ತುಶಿಲ್ಪಗಳೆಂದು ವರ್ಗೀಕರಿಸುವ ರೂಢಿಯಿದೆ.[೫]

ಭಾರತದ ಪ್ರಾಚೀನ ನಾಗರಿಕತೆ ಸಿಂಧೂಬಯಲಿನ ಅಥವಾ ಹರಪ್ಪಾ ಸಂಸ್ಕೃತಿಯ ಜನರು ಪ್ರಕೃತಿಯ ಆರಾಧಕರಾಗಿದ್ದು ಲಿಂಗ, ಪಶುಪತಿ, ಮೊದಲಾದ ವಿಗ್ರಹಗಳನ್ನು ಪೂಜಿಸುತ್ತಿದ್ದರು ಎಂದು ಸಂಶೋಧನೆಗಳಿಂದ ತಿಳಿದುಬಂದಿದೆ. [೬]ಆದರೆ ಅವರು ನಿರ್ಮಿಸಿದ ದೇವಾಲಯಗಳು ಕಂಡುಬಂದಿಲ್ಲ. ದೇಗುಲ ವಾಸ್ತು ರಚನೆಗೆ ಪೂರ್ವದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆ ಹಾಗೂ ಆರಾಧನೆ ಇತ್ತೆಂಬುದು, ಇದರಿಂದ ದೃಢಪಡುತ್ತದೆ. ಈ ಸಂಸ್ಕೃತಿಯ ಜನರು ತೌಕಿಕ, ಸಾರ್ವಜನಿಕ, ರಕ್ಷಣಾ ವಾಸ್ತು ನಿರ್ಮಿತಿಗಳನ್ನು ಮಾಡಿರುವುದರಿಂದ ಧಾರ್ಮಿಕ ವಾಸ್ತುಗಳು ಇದ್ದಿರಬೇಕು. [೭]ಭಾರತದ ಚರಿತ್ರೆಯಲ್ಲಿ ದೇಗುಲದ ವಾಸ್ತು ಉದಾರಣೆಗಳು ದೂರೆಯುವುದು ಬೌದ್ಧ ಮತ್ತು ಜೈನ ಧರ್ಮಗಳು ಅಸ್ಥಿತ್ವಕ್ಕೆ ಬಂದ ನಂತರವೆ. ಈ ಧರ್ಮಗಳಿಗೆ ಸಂಬಂಧಿಸಿದ ಸ್ತೂಪ ಮತ್ತು ಚೈತ್ಯಗಳು ಆರಂಭದ ಧಾರ್ಮಿಕ ಕಟ್ಟಡ ವಾಸ್ತುವಿನ ರೂಪವಾಗಿದೆ. [೮]ಸ್ತೂಪವು, ಬೌದ್ಧಧರ್ಮದ ಒಂದು ಧಾರ್ಮಿಕ ಕಟ್ಟಡ. ಸ್ತೂಪಗಳು ಪ್ರಾಥಮಿಕವಾಗಿ ಸಮಾಧಿ ದಿಬ್ಬಗಳು. [೯]ಬುದ್ಧನ ಅವಶೇಷಗಳನ್ನು ಒಳಗೊಂಡ ಸ್ತೂಪಗಳು ಭಾರತದಲ್ಲಿ ಅಶೋಕನ ಕಾಲದಲ್ಲಿ ಹೆಚ್ಚಾಗಿ ನಿರ್ಮಾಣಗೂಂಡಿರುವುದನ್ನು ಕಾಣಬಹುದು. ಅಶೋಕನು ಕಳಿಂಗದ ಯುದ್ಧದಲ್ಲಿ ನಡೆದ ರಕ್ತಪಾತವನ್ನು ನೋಡಿ ವಿರಕ್ತಿಯಿಂದ ಬೌದ್ಧಧರ್ಮವನ್ನು ಸ್ವೀಕರಿಸಿದ ತರುವಾಯ ಬೌದ್ಧ

ಧರ್ಮಕ್ಕೆ ಸಂಬಂಧಿಸಿದ ಧಾರ್ಮಿಕ ಕಟ್ಟಡಗಳ ರಚನೆಯನ್ನು ಕೈಗೂಂಡು ಸ್ತಂಭಗಳು, ಸ್ತೂಪಗಳು, ಗುಹಾಲಯಗಳ ನಿರ್ಮಾಣ ಕಾರ್ಯಮಾಡಿದನು. [೧೧]ಸಾಂಚಿ, ಕಾರ್ಲೆ, ಬಾಜ ಮತ್ತು ಸಾರಾನಾಥಗಳಲ್ಲಿ ಈ ಬಗೆಯ ಸ್ತೂಫಪಗಳನ್ನು ಕಾಣಬಹುದು. ಅದೇ ರೀತಿ ಚೈತ್ಯಾಲಯಗಳು ಸಹ ಬೌದ್ಧರ ಧಾರ್ಮಿಕ ಕಟ್ಟಡಗಳಾಗಿದ್ದವು. ಇವುಗಳನ್ನು ಕಲ್ಲುಗಳನ್ನು ಕೂರೆದು ನಿರ್ಮಿಸಲಾಗುತ್ತಿತ್ತು ಬುದ್ಧನ ಪ್ರತೀಕವಾಗಿರುವ ಸ್ತೂಫವನ್ನು ಸಭಾಮಂಟಪಗಳಲ್ಲಿಟ್ಟು ಪೂಜಿಸಲಾಗುತ್ತಿತ್ತು. ಇಂತಹ ಮಂಟಪವನ್ನು ಚೈತ್ಯಗೃಹ ಅಥವಾ ಚೈತ್ಯಾಲಯ ಎಂದು ಹೆಸರು. [೧೧]ಅಶೋಕನ ಕಾಲದಲ್ಲಿಯೇ ಚೈತ್ಯಾಲಯಗಳು ನಿರ್ಮಾಣಗೂಂಡವು, ಬರಾಬರ್ ನಾಗರ್ಜುನ ಕೂಂಡದ ಬೆಟ್ಟಗಳು ಹಾಗೂ ರಾಜಘೀರ ಬಳಿ ಈ ಕಾಲದ ಚೈತ್ಯಾಲಯಗಳನ್ನು ಕಾಣಬಹುದು. ಚೈತ್ಯಾಲಯಗಳಂತೆ ಆ ಕಾಲದಲ್ಲಿ ವಿಹಾರಗಳ ರಚನೆಯು ಈ ಸಂದರ್ಭವನ್ನು ಶಿಲಾವಿನ್ಯಾಸ, ಭಾರತೀಯ ಕಟ್ಟಡ ನಿರ್ಮಾಣಕ್ಕೆ ಹೂಸ ಆಯಾಮವನ್ನು ತಂದು ಕೊಟ್ಟಿತು ಎಂದು ಹೇಳಬಹುದು. ಕಲ್ಲಿನಲ್ಲಿ ಕೂರೆದು ನಿರ್ಮಿಸಿರುವ ಚೈತ್ಯಗೃಹ, ವಿಹಾರ, ಗುಹಾಂತರ ದೇವಾಲಯಗಳಿಗೆ ಇದೇ ದಾರಿ ಮಾಡಿಕೊಟ್ಟನು. ಇವುಗಳನ್ನು ಆಂಧ್ರಪ್ರದೇಶ, ಗುಜರಾತ, ಕಾಥೆವಾಡ, ದಖ್ಖನ ಪ್ರದೇಶಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಣಬಹುದು.[೧೨]

ಗುಪ್ತರ ಕಾಲದಲ್ಲಿ ದೇವಾಲಯಗಳ ನಿರ್ಮಾಣದಲ್ಲಿ ಹೊಸ ಆಯಾಮಗಳು ಕಂಡುಬಂದವು, ಇಟ್ಟಿಗೆ ಮತ್ತು ಕಲ್ಲನ್ನು ಬಳಸಿ ದೇವಾಲಯವನ್ನು ನಿರ್ಮಾಣ ಮಾಡುವ ರೂಢಿ ಗುಪ್ತರ ಕಾಲದಲ್ಲಿ ಪ್ರಾರಂಭವಾಯಿತು. ನಾಲ್ಕನೆಯ ಶತಮಾನದ ಪ್ರಾರಂಭದಲ್ಲಿ ದೇವಾಲಯ ಕಟ್ಟಡ ನಿರ್ಮಾಣ ಪ್ರಾರಂಭನಾಯಿತು. ಕಟ್ಟಡ ರಚನೆ, ಮೂರ್ತಿಶಿಲ್ಪ ಮತ್ತು ಚಿತ್ರಗಳಲ್ಲಿ ಸೌಂದರ್ಯ ತತ್ವಗಳನ್ನು ಕಂಡುಕೊಂಡು ಅವನ್ನು ಗ್ರಂಥೀ ಕರಿಸಿದರು. [೧೩]ಗುಪ್ತರ ಕಾಲದಲ್ಲಿ ದೇವಾಲಯಗಳು ವಿಕಾಸಗೊಂಡವು. ಅಂಗಗಳು ಬೆಳೆದು ಬಂದನ್ನು ಇವರ ಕಾಲದಲ್ಲಿ ಕಾಣಬಹುದು. ಗುಪ್ತರ ಕಾಲದ ಮುಖ್ಯ ದೇವಾಲಯಗಳಲ್ಲಿ ಭೋಮಾರದ ಶಿವ ದೇವಾಲಯ, ನಾಚ್ನಾದ ಪಾರ್ವತಿ ದೇವಾಲಯ ಜಬ್ಬಲಪುರದ ವಿಷ್ಣು, ಕಂಕಾಳಿದೇವಿ ದೇವಾಲಯಗಳು ಮುಖ್ಯವಾಗಿವೆ. "ಗುಪ್ತ ಸಾಮ್ರಾಜ್ಯದ ಪತನದ ನಂತರದ ಶತಮಾನಗಳಲ್ಲಿ ದೇವಾಲಯ ನಿರ್ಮಾಣ ಶೈಲಿಯಲ್ಲಿ ಅಪಾರವಾದ ಪ್ರಗತಿ ಮತ್ತು ಬದಲಾವಣೆಗಳನ್ನು ಮೈಗೂಡಿಸಿಕೂಂಡಿತು. [೧೪]ಭಾರತೀಯ ಶಿಲ್ಪಶಾಸ್ತ್ರಗಳು

ದೇವಾಲಯಗಳನ್ನು ನಾಗರ, ವೇಸರ, ಮತ್ತು ದ್ರಾವಿಡಗಳೆಂದು ವರ್ಗೀಕರಿಸಲಾಗುತ್ತದೆ. ಉತ್ತರ ಭಾರತದ ದೇವಾಲಯಗಳು ಬಹುಪಾಲು ನಾಗರ ಶೈಲಿಗೆ ಸೇರಿವೆ.

ಕರ್ನಾಟಕವು ಎಲ್ಲಾ ಬಗೆಯ, ವಿಭಿನ್ನ ಶೈಲಿಯ ದೇವಾಲಯಗಳ ತವರೂರಾಗಿ ಮೌರ್ಯರ ಕಾಲದಿಂದ ವಿಜಯನಗರೋತ್ತರ ಕಾಲದವರೆಗೆ ದೇವಾಯಗಳು ಪೋಷಕರ ಮತ್ತು ಕಲಾವಿದರ ಸಹಕಾರಗಳೊಂದಿಗೆ ವಿಸ್ಮಯಕಾರಕವಾಗಿ ಬೆಳೆದುನಿಂತಿವೆ. ವಿವಿಧ ಅರಸು ಮನೆತನಗಳು, ವಿವಿಧ ಕಾಲಘಟ್ಟದಲ್ಲಿದ್ದು ಅದಕ್ಕನುಗುಣವಾಗಿ ಮೂಡಿಬಂದಿದೆ.[೧೫]

ಕರ್ನಾಟಕದಲ್ಲಿ ಮೌರ್ಯ ಮತ್ತು ಶಾತವಾಹನರ ಕಾಲದ ಹಲವು ನಿವೇಶನಗಳಲ್ಲಿಯ ಉತ್ಖನದಿಂದ ಬೆಳಕಿಗೆ ಬಂದಿದ್ದು, ಆ ನೆಲೆಗಳಲ್ಲಿನ ಕಟ್ಟಡ ಅವಶೇಷಗಳು, ಸ್ತೂಪ, ಚೈತ್ಯಗಳು, ಮೊರೆಯರ ಮನೆಗಳು ಅಥವಾ ಪಾಂಡವರ ಮನೆಗಳು ಎಂದು ಕರೆಯಲಾಗುವ ಬೃಹತಶಿಲಾಗೋರಿಗಳು ಕರ್ನಾಟಕದಲ್ಲಿ ದೇವಾಲಯಗಳಿಗೆ ಪ್ರೇರೇಪಿಸಿತು. ಬ್ರಹ್ಮಗಿರಿ, ಚಂದ್ರವಳ್ಳಿ ಬನವಾಸಿ, ಪಟ್ಟದಕಲ್ಲು, ಐಹೊಳೆ ಹಾಗೂ ಸನ್ನತಿಯಲ್ಲಿ ಪ್ರಾಚೀನ ಕಟ್ಟಡ ಅವಶೇಷಗಳು ದೂರೆತಿವೆ. ಇತ್ತೀಚಿಗೆ ಉತ್ಖನಗೂಂಡ ಸನ್ನತಿಯ ಉತ್ಖನದಲ್ಲಿ ಒಂದು ಭವ್ಯವಾದ ಸ್ತೂಪದ ಅವಶೇಷ ದೂರೆತಿದೆ. ಗಾತ್ರದಲ್ಲಿ ಚಿಕ್ಕದಿದ್ದು ಅದರ ಹೊರ ಮೈ ಉಬ್ಬುಶಿಲ್ಪದ ಶಿಲ್ಪಗಳಿಂದ ಕೂಡಿದೆ. ಉಬ್ಬು ಶಿಲ್ಪದಲ್ಲಿ ಭೋಧಿ ವೃಕ್ಷ ಮತ್ತು ಪಾದಗಳನ್ನು ಕೆತ್ತಲಾಗಿದೆ. ಅವು ಬುದ್ಧನನ್ನು ಪ್ರತಿನಿಧಿಸುತ್ತದೆ. ಶಾತವಾಹನರ ಮತ್ತು ಅವರ ಅನಂತರದ ಕಾಲದ ಶಾಸನಗಳಲ್ಲಿ ಕೆಲವು ವೈದಿಕ ಸಂಪ್ರದಾಯದ ದೇವಾಲಯಗಳ ಉಲ್ಲೇಖಗಳು ದೊರತಿವೆ. ಶಿವಸ್ಕಂದವರ್ಮನ ಮಳವಳ್ಳಿ ಶಾಸನ ಮತ್ತು ಪಟ್ಟಿದೇವರನ್ನು ಕದಂಬರ ತಾಳಗುಂದದ ಸ್ತಂಭ ಶಾಸನ ಶಾತಕರಣಿಗಳಿಂದ ಪೂಜಿತ ಪ್ರಣವೇಶ್ವರ ದೇವಾಲಯವನ್ನು ಉಲ್ಲೇಖಿಸಿವೆ. ಮೇಲಿನ ಈ ಉಲ್ಲೇಖಗಳು ಕರ್ನಾಟಕದಲ್ಲಿ ಶಾತವಾಹನರ ಕಾಲದ ದೇವಾಲಯಗಳ ವಿಕಾಸದ ಅಂಶಗಳನ್ನು ಕುರಿತು ಹೇಳುತ್ತವೆ. [೧೬]ಶಾತವಾಹನರ ನಂತರದಲ್ಲಿ ಕರ್ನಾಟಕದಲ್ಲಿ ಕದಂಬರ ಕಾಲದಲ್ಲಿ ದೇವಾಲಯಗಳ ಬೆಳವಣಿಗೆಯನ್ನು ಕಾಣಬಹುದು. ಕದಂಬರು ಕ್ರಿ.ಶ. ನಾಲ್ಕನೇಯ ಶತಮಾನದಿಂದ ಆರನೆಯ ಶತಮಾನದವರೆಗೆ ಆಳ್ವಿಕೆ ನಡೆಯಿಸಿದ್ದಾರೆ. ಕರ್ನಾಟಕದಲ್ಲಿ ಕದಂಬರ ಕಾಲಕ್ಕೆ ಶಿಲಾವಾಸ್ತುವಿನ ಪ್ರಮುಖ ಸಾಕ್ಷ್ಯಗಳು ದೂರಕುತ್ತವೆ.

ಕದಂಬರ ಕಾಲದ ದೇಗುಲ ವಾಸ್ತುಶಿಲ್ಪವನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ.[೧೭] ಅವುಗಳೆಂದರೆ ೧.ಕೊರೆದ ಗುಹಾಲಯ, ೨.ಕಟ್ಟಡ ದೇವಾಲಯ ವಾಸ್ತುಶಿಲ್ಪ ಕದಂಬರ ಕಾಲದ ಗುಹಾಲಯಗಳು ಗೋವೆಯ ಸಮೀಪದ ಅರವೇಲಮ್, ನೋರ್ವಾ, ಲಂಪಗಾವ್ ಇತ್ಯಾದಿ ಸ್ಥಳಗಳಲ್ಲಿ ದೂರಕಿವೆ. ಜಂಬಿಟ್ಟಿಗೆ(Laterite) ಬಂಡೆಗಳಲ್ಲಿ ಇವುಗಳನ್ನು ನಿರ್ಮಿಸಿದ್ದು, ಇಲ್ಲಿನ ಮೂರ್ತಿಶಿಲ್ಪಗಳು, ಶಾಸನ ಲಿಪಿ ಮುಂತಾದ ಆಧಾರಗಳಿಂದ ಇವು ಕದಂಬ ಶೈಲಿ ಎಂದು ವಿದ್ವಾಂಸರು ಗುರುತಿಸಿದ್ದಾರೆ. [೧೮]ದೇವಾಲಯಗಳಲ್ಲಿ ಹಲಸಿಯ ಜೈನ ಬಸದಿಯನ್ನು ಕ್ರಿ.ಶ. ಐದನೆಯ ಶತಮಾನದಲ್ಲಿ ಮೃಗೇಶವರ್ಮನಿಂದ ನಿರ್ಮಾಣಗೊಂಡಿತು. ಇದು ಗರ್ಭಗೃಹ, ಶುಕನಾಸಿ ಮತ್ತು ಚಿಕ್ಕಮಂಟಪಗಳಿಂದ ಕೂಡಿದೆ.[೧೯]

ಹಲಸಿಯಲ್ಲಿರುವ ಹಟ್ಟಿ ಈಶ್ವರ, ಕಲ್ಲೇಶ್ವರ, ಸುವರ್ಣೇಶ್ವರ, ನರಸಿಂಹ ಮೊದಲಾದ ದೇವಾಲಯಗಳು ಕದಂಬ ಶೈಲಿಯ ಉದಾಹರಣೆಗಳಾಗಿವೆ. ತಾಳಗುಂದದ ಪ್ರಣವೇಶ್ವರ ದೇವಾಲಯ ಹಾಗೂ ಬನವಾಸಿಯ ಮಧುಕೇಶ್ವರ ದೇವಾಲಯಗಳು ಇವರ ಕಾಲದ ಬಹುಮುಖ್ಯ ದೇವಾಲಯಗಳು.[೨೦]

ಗುಪ್ತರ ಪೋಷಣೆಯಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯಗಳು ಉತ್ತರ ಭಾರತದಲ್ಲಿ ನಡೆಯುತ್ತಿರುವ ಕಾಲದಲ್ಲಿಯೇ ದಕ್ಷಿಣದಲ್ಲಿ ಬಾದಾಮಿ ಚಾಳುಕ್ಯರು ನೂತನವಾಗಿ ದೇವಾಲಯ ಕಟ್ಟಿ ಪ್ರಯೋಗಿಸಲು ಪ್ರಾರಂಭಿಸಿದರು. ಬಾದಾಮಿಯ ಚಾಳುಕ್ಯರು ಇನ್ನೂರು ವರ್ಷಗಳ ಕಾಲ (ಕ್ರಿ.ಶ.೫೩೪–ಕ್ರಿ.ಶ.೭೫೩) ವೈಭವದಿಂದ ಕರ್ನಾಟಕವನ್ನು ಆಳಿದರು. ಕರ್ನಾಟಕದ ವಾಸ್ತುಶಿಲ್ಪ ಶೈಲಿಯಲ್ಲಿ ಅನೇಕ ಬಗೆಯ ಪ್ರಯೋಗಳನ್ನು ನಡೆಯಿಸಿದ ಅವಧಿ ಎಂದರೆ ಬಾದಾಮಿ ಚಾಳುಕ್ಯ ಮನೆತನದ ಆಳ್ವಿಕೆಯ ಕಾಲ. ಇವರನ್ನು ಕರ್ನಾಟಕದ ವಿಶಿಷ್ಟ ವಾಸ್ತುಶೈಲಿಯ ಪ್ರಯೋಗಕರ್ತರೆಂದು ಕರೆಯಲಾಗಿದೆ.

ಇವರ ಕಾಲದ ರಚನೆಗಳನ್ನು ಪಟ್ಟದಕಲ್ಲು, ಐಹೊಳೆ, ಮಹಾಕೂಟಗಳಲ್ಲಿ ಮತ್ತು ನೆರೆಯ ಆಂಧ್ರಪ್ರದೇಶದ ಆಲಂಪುರ, ಹಾಗೂ ಮಹಾನಂದಿಗಳಲ್ಲು ಇವೆ. ಈ ದೇವಾಲಯಗಳಲ್ಲಿ ಕಂಡುಬರುವ ವಾಸ್ತುವೈವಿಧ್ಯತೆಗಳು ಗಮನಾರ್ಹವಾಗಿವೆ. ಚಾಳುಕ್ಯರ ಕಾಲದ ದೇವಾಲಯ ವಾಸ್ತುಶಿಲ್ಪವನ್ನು ಸ್ಥೂಲವಾಗಿ ಎರಡು ಭಾಗಗಳಾಗಿ

ವರ್ಗೀಕರಿಸಬಹುದು. ಅವು ೧.ಗುಹಾ ದೇವಾಲಯಗಳು ಮತ್ತು ೨.ರಾಚನಿಕ ಅಥವಾ ಕಟ್ಟಡ ದೇವಾಲಯಗಳು. ಬಾದಾಮಿ, ಮತ್ತು ಐಹೊಳೆಯಲ್ಲಿ ಒಟ್ಟು ಒಂಬತ್ತು ಗುಹಾ ದೇವಾಲಯಗಳನ್ನು ಕಾಣಬಹುದು. ಇವುಗಳು ಶೈವ, ಮತ್ತು ವೈಷ್ಣವ, ಜೈನ ಧರ್ಮಗಳಿವೆ ಸೇರಿವೆ. ಆಯತಾಕಾರದ ತಳವಿನ್ಯಾಸದಲ್ಲಿ ಗರ್ಭಗುಡಿ, ಅಂತರಾಳ ಮತ್ತು ಮುಖಮಂಟಪಗಳು ಇರುತ್ತವೆ. ಬಾದಾಮಿ ಚಾಳುಕ್ಯರ ಕಾಲದ ರಾಚನಿಕ (ಕಟ್ಟಡ) ದೇವಾಲಯಗಳು ಸಹ ಅವರ ಕಾಲದ ಕಲೆ ಮತ್ತು ವಾಸ್ತುಶಿಲ್ಪದ ನಿರ್ಮಿತಿಗಳಾಗಿವೆ. ಇವರ ಕಾಲದಲ್ಲಿ ಐಹೊಳೆ, ಮಹಾಕೂಟ ಮತ್ತು ಪಟ್ಟದಕಲ್ಲುಗಳಲ್ಲಿ ರಾಚನಿಕ ದೇವಾಲಯಗಳು ಇವೆ. ಅವರ ಕಾಲದ ಸ್ಥಪತಿಗಳ ವಿಭಿನ್ನ ತಳವಿನ್ಯಾಸಗಳಿರುವ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಬಹುಪಾಲು ದೇವಾಲಯಗಳಿಗೆ ಸರಳವಾದ ತಳವಿನ್ಯಾಸವಿದೆ. ಇವು ಚೌಕಾರದ ಆಯತಾಕಾರದ ಚಿಕ್ಕಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪಗಳನ್ನು ಹೊಂದಿವೆ.

ಪ್ರದಕ್ಷಿಣಾ ಪಥವಿರುವ ದೇವಾಲಯಗಳನ್ನು ಸಾಂಧಾರ ಮಾದರಿಯ ದೇವಾಲಯವೆಂದು ಗುರುತಿಸಲಾಗುತ್ತದೆ. ಗರ್ಭಗುಡಿಯಲ್ಲಿನ ಮೂರ್ತಿಯನ್ನು ಸುತ್ತುಹಾಕಲು ಸಾಧ್ಯವಾಗುವಂತೆ ಗರ್ಭಗೃಹದ ಸುತ್ತ ಪ್ರದಕ್ಷಿಣ ಪಥವನ್ನು ಒಳಭಾಗದಲ್ಲಿ ನಿರ್ಮಿಸಲಾಗಿರುತ್ತದೆ. ಉದಾಹರಣೆಗೆ ಐಹೊಳೆಯ ಹುಚ್ಚಮಲ್ಲಿ ಗುಡಿ, ಪಟ್ಟದಕಲ್ಲಿನ ಸಂಗಮೇಶ್ವರ ಮಹಾಕೂಟದ ಮಲ್ಲಿಕಾರ್ಜುನ ಗುಡಿಗಳನ್ನು ಇಲ್ಲಿ ಹೆಸರಿಸಬಹುದು. ಐಹೊಳೆಯ ಲಾಡಖಾನ ಗುಡಿಯ ತಲವಿನ್ಯಾಸ ಇನ್ನೊಂದು ಮಾದರಿಯಲ್ಲಿದೆ. ಬಾದಾಮಿ ಚಾಳುಕ್ಯರು ಅವರ ಕಾಲದ ದೇವಾಲಯಗಳ ನಿರ್ಮಾಣಕ್ಕಾಗಿ ಸ್ಥಳೀಯವಾಗಿ ದೊರೆಯುವ ನಯವಾದ ನಸುಗೆಂಪು ಅಥವಾ ತಿಳಿ ಹಳದಿ ಬಣ್ಣದ ಮರಳು ಕಲ್ಲನ್ನೇ (Sand Stone) ಹೆಚ್ಚಾಗಿ ಬಳಸಿದ್ದಾರೆ. ಹೀಗೆ ಬಾದಾಮಿ ಚಾಳುಕ್ಯರ ಕಾಲದ ದೇವಾಲಯಗಳ ರಚನಾ ವಿನ್ಯಾಸವು ಹಲವು ವಾಸ್ತುಶೈಲಿಯ ವಿಶೇಷತೆಗಳಿಂದ ಕೂಡಿದೆ. [೨೧]ಬಾದಾಮಿ ಚಾಳುಕ್ಯರಿಂದ ಪ್ರಾರಂಭವಾದ ಚಾಳುಕ್ಯ ವಾಸ್ತುಶಿಲ್ಪ ಶೈಲಿಯ ನಿರ್ಮಾಣ ಚಟುವಟಿಕೆಯು ಅವರ ಉತ್ತರಾಧಿಕಾರಿಗಳಾದ ಕಲ್ಯಾಣ ಚಾಳುಕ್ಯ (೧೦-೧೨ನೇಯ ಶತಮಾನ) ಕಾಲದಲ್ಲಿಯು ಮುಂದುವರೆಯಿತು. ಇದು ಬಾದಾಮಿ ಚಾಳುಕ್ಯರ ವಾಸ್ತು ಸಂಪ್ರದಾಯದ ವಿಕಾಸವೇ ಆದರೂ ಅದು ಸಂಪೂರ್ಣವಾಗಿ ವಿಕಾಸ ಹೊಂದಿ ಅನೇಕ

ಪ್ರಮುಖ ಬದಲಾವಣೆಗಳಿಗೊಳಗಾಗಿವೆ. ಕಲ್ಯಾಣ ಚಾಳುಕ್ಯರು ಕಪ್ಪುಮಿಶ್ರಿತ ನೀಲಿಛಾಯೆಯ ಕಲ್ಲನ್ನು ದೇವಾಲಯಗಳ ನಿರ್ಮಾಣಕ್ಕೆ ಬಳಸಿರುವರು.

ಕಲ್ಯಾಣ ಚಾಳುಕ್ಯರ ಕಾಲದಲ್ಲಿ ವಿಶಿಷ್ಟ ಶೈಲಿಯ ದೇವಾಲಯಗಳನಗನ್ನು ನಿರ್ಮಿಸಿದರು. ಮುಂದೆ ಹೊಯ್ಸಳರು ಈ ಶೈಲಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಮುಂದುವರೆಸಿದರು. ಹೆಚ್ಚಿನ ಅವರ ದೇವಾಲಯಗಳು ನಿರಂಧಾರ ಅಂದರೆ ಒಳ ಪ್ರದಕ್ಷಿಣಾ ಪಥವಿಲ್ಲದ ಮಾದರಿಯದಾಗಿವೆ. ಕಲ್ಯಾಣ ಚಾಳುಕ್ಯರ ದೇವಾಲಯಗಳ ಅಧಿಷ್ಠಾನದಲ್ಲಿ ಉಪಾನ, ಜಗತಿ, ಕಂಪ, ಕಂಠ ಮತ್ತು ಪಟ್ಟಿಕೆಗಳು ಇರುತ್ತದೆ.

ಕೆಲವು ಸಂದರ್ಭಗಳಲ್ಲಿ ಮಕರದ ತಲೆ, ಕೀರ್ತಿಮುಖ, ಮನುಷ್ಯ ಮತ್ತು ದೇವತಾ ಪುರುಷರ ಚಿಕ್ಕ ಚಿಕ್ಕ ಶಿಲ್ಪಗಳನ್ನು ಇವರ ದೇವಾಲಯಗಳಲ್ಲಿ ಕಂಡುಬರುತ್ತದೆ. ಕಲ್ಯಾಣ ಚಾಳುಕ್ಯರ ದೇವಾಲಯಗಳಲ್ಲಿ ಜಾಲಂಧ್ರಗಳು ವೈಶಿಷ್ಟವಾಗಿರುತ್ತದೆ. ಈ ದೇವಾಲಯಗಳಲ್ಲಿ ಜಾಲಂಧ್ರಗಳನ್ನು ಸಾಮಾನ್ಯವಾಗಿ ದ್ವಾರಗಳ ಎರಡು ಬದಿಗೆ ಅಳವಡಿಸಿರುತ್ತಾರೆ. ಪ್ರವೇಶದ್ವಾರ ಶುಕನಾಸಿ, ಅಂತರಾಳ ಮತ್ತು ಗರ್ಭಗೃಹ ದ್ವಾರಗಳ ಇಕ್ಕೆಲಗಳಲ್ಲಿ ಇಂತಹ ಜಾಲಂಧ್ರಗಳನ್ನು ಕಾಣಬಹುದು. ಇವರ ಕಾಲದ ದೇವಾಲಯಗಳ ದ್ವಾರಗಳು ಹೆಚ್ಚು ಅಲಂಕೃತವಾಗಿದ್ದು ಅಲ್ಲಿ ದ್ವಾರ ಶಾಖೆಗಳಿರುತ್ತವೆ. ಐದು ಅಥವಾ ಅದಕ್ಕೂ ಹೆಚ್ಚು ದ್ವಾರಶಾಖೆಗಳಿರುತ್ತವೆ. ಕಲ್ಯಾಣ ಚಾಳುಕ್ಯರ ದೇವಾಲಯಗಳ ಇನ್ನೊಂದು ಗಮನಾರ್ಹ ಲಕ್ಷಣವೆಂದರೆ ಕಂಬಗಳ ವಿನ್ಯಾಸ. [೨೨]ಈ ಕಾಲದ ದೇವಾಲಯಗಳು ದ್ರಾವಿಡ ಮತ್ತು ನಾಗರ ಶೈಲಿಗಳ ಜೋತೆಗೆ ವೇಸರ ಶೈಲಿಯಲ್ಲಿಯೂ ನಿರ್ಮಾಣವಾಗಿವೆ. ಹಸಿರು ಮಿಶ್ರಿತ ಶಿಲೆಯ ಜೊತೆಗೆ ಕರ್ನಾಟಕದ ವಿವಿಧೆಡೆ ಕಣ ಶಿಲೆಯನ್ನು ದೇವಾಲಯಗಳ ನಿರ್ಮಾಣಕ್ಕೆ ಬಳಸಿರುವರು. ಕಲ್ಯಾಣ ಚಾಳುಕ್ಯರ ಕಾಲದ ಪ್ರಮುಖ ದೇವಾಲಯಗಳೆಂದರೆ ಇಟಗಿಯ ಮಹದೇವ ದೇವಾಲಯ, ಲಕ್ಕುಂಡಿಯ ಕಾಶಿವಿಶ್ವನಾಥ ಕುಕನೂರಿನ ನವಲಿಂಗೇಶ್ವರ, ಗದುಗಿನ ತ್ರಿಕೂಟೇಶ್ವರ, ಸರಸ್ವತಿ ಮತ್ತು ಸೋಮೇಶ್ವರ, ಹಾವೇರಿ ಜಿಲ್ಲೆಯ ಮುಕ್ತೇಶ್ವರ ದೇವಾಲಯಗಳು ಮುಖ್ಯವಾಗಿವೆ.

ಕಲ್ಯಾಣ ಚಾಳುಕ್ಯರ ಸಾಮಂತರಾಗಿದ್ದ ಹೊಯ್ಸಳರು ೧೨ನೇ ಶತಮಾನದ ಪೂರ್ವಾರ್ಧದಲ್ಲಿ ಅವರ ಉತ್ತರಾಧಿಕಾರಿಗಳಾಗಿ ಅವರ ಪರಂಪರೆಯನ್ನು ಮುಂದುವರಿಸಿದರು. ಹೊಯ್ಸಳ ಸ್ಥಪತಿಗಳು ಚಾಳುಕ್ಯ ವಾಸ್ತುಶೈಲಿಯನ್ನೇ ಅನುಕರಿಸಿದರೂ

ಕೆಲವು ಪ್ರಯೋಗಗಳನ್ನು ನಡೆಯಿಸಿ ಹೊಸ ವಾಸ್ತು ವಿನ್ಯಾಸಗಳನ್ನು ಅಳವಡಿಸಿದರು. ಇವರ ಕಾಲದಲ್ಲಿ ರೂಪಗೊಂಡ ಕಲೆ, ವಾಸ್ತುಶಿಲ್ಪ ವಿಶ್ವಪ್ರಸಿದ್ಧ ಪಡೆದಿದೆ. ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವ ದೇವಾಲಯಗಳನ್ನು "ಸೋಪಸ್ಟೋನ್" ಕಲ್ಲನ್ನು ಬಳಸಿ ರೂಪಿಸಿದ್ದಾರೆ, ಇದರಲ್ಲಿ ಸೂಕ್ಷ್ಮ ಕೆತ್ತನೆಗೆ ಅವಕಾಶವಿರುತ್ತದೆ. [೨೩]ಈ ಕಲ್ಲಿನ ಗುಣವೆಂದರೆ ಭೂಮಿಯಿಂದ ತೆಗೆದಾಗ ತುಂಬಾ ಮೆದುವಾಗಿದ್ದು. ನಂತರ ಗಾಳಿಯಲ್ಲಿ ಸಿಕ್ಕಂತೆ ಗುಡುಸಾಗುತ್ತದೆ. ಈ ಕಲ್ಲಿನಲ್ಲಿ ಕೊರೆಯುವುದು ತುಂಬಾ ಸುಲಭ.

ಇವರ ದೇವಾಲಯಗಳಲ್ಲಿ ಮುಖ್ಯವಾಗಿ ೧. ಗರ್ಭಗೃಹ ಮತ್ತು ವಿಮಾನ ೨. ಶುಕನಾಸಿ (ಅಂತರಾಳ) ಮತ್ತು ನವರಂಗ (ಮಂಟಪ) ೩. ಮುಖಮಂಟಪ ಇರುತ್ತದೆ. ತಲವಿನ್ಯಾಸವನ್ನು ಅನುಸರಿಸಿ ಹೊಯ್ಸಳ ದೇವಾಲಯಗಳನ್ನು ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಮತ್ತು ಪಂಚಕೂಟಗಳಾಗಿ ವಿಂಗಡಿಸಬಹುದು. ಹಳೇಬೀಡಿನ ಹೊಯ್ಸಳೇಶ್ವರ, ಬೆಳ್ಳೂರಿನ ಕಣ್ಣೇಶ್ವರ ದೇವಾಲಯಗಳು ಪ್ರಸಿದ್ಧ ದ್ವಿಕೂಟ ದೇವಾಲಯಗಳು.[೨೪] ಅದೇ ರೀತಿ ಹೊಯ್ಸಳ ಕಾಲದ ತ್ರಿಕೂಟ ದೇವಾಲಯಗಳ ರಚನೆಯ ಪರ್ವಕಲವೆಂದು ಹೇಳಬಹುದು ಕಂಬದಹಳ್ಳಿ, ಭದ್ರಾವತಿ, ಸೆಟ್ಟಿಕೆರೆ, ಬೆಳ್ಳೂರು, ಬಂದಳಿಕೆ, ಹೊಸಹೊಳಲು ಮಾದಲಾದ ಸ್ಥಳಗಳಲ್ಲಿ ತ್ರಿಕೂಟ ದೇವಾಲಯಗಳಿವೆ. ಬಹು ಎತ್ತರವಾಗಿರುವ[೨೫] ಹೊಯ್ಸಳ ದೇವಾಲಯಗಳ ಅಧಿಷ್ಠಾನಗಳು ಅತ್ಯಂತ ಸುಂದರವಾದ ಅಲಂಕಾರವನ್ನು ಹೊಂದಿರುತ್ತವೆ. ಇವುಗಳಲ್ಲಿ ಆನೆಗಳ ಸಾಲು, ಅಶ್ವಗಳ ಸಾಲು, ಎಲೆ ಬಳ್ಳಿಗಳ, ರಾಮಾಯಣ, ಮಹಾಭಾರತಗಳ ಕಥೆಗಳು ಶಿಲ್ಪಗಳು ನಿರೂಪಣಾ ಶಿಲ್ಪ ಹಂಸಗಳ ಸಾಲುಗಳನ್ನು ಅವುಗಳಲ್ಲಿ ಕಾಣಬಹುದು. ಹೊಯ್ಸಳ ಶೈಲಿಯ ಮತ್ತೊಂದು ವಿಶಿಷ್ಟ ಅಂಶವೆಂದರೆ ಮದನಿಕೆ ಅಥವಾ ಶಿಲಾಬಾಲಿಕೆಯರು. ನವರಂಗದ ಸುಂದರ ಕಂಬಗಳ ಬೋದಿಗೆಯ ಮೇಲೆ ಈ ಶಿಲ್ಪಗಳನ್ನು ಕಾಣಬಹುದು ದಕ್ಷಿಣ ಕರ್ನಾಟಕದ ಬಹುಭಾಗಗಳಲ್ಲಿ ಇವರ ದೇವಾಲಯಗಳಿವೆ. [೨೬]

ಮಧ್ಯಕಾಲೀನ ಕರ್ನಾಟಕದ ಪ್ರಮುಖ ಸಾಮ್ರಾಜವು ವಿಜಯನಗರ. ಇವರ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಚಾಳುಕ್ಯ, ಕಾಕತೀಯ ಮತ್ತು ಹೊಯ್ಸಳ ಪರಂಪರೆಯನ್ನು ಮುಂದುವರಿಸುವುದರೊಂದಿಗೆ. ತಮ್ಮ ಶೈಲಿಯ ದೇವಾಲಯಗಳನ್ನು ಸಹ ನಿರ್ಮಿಸಿದರು. [೨೭]ಹೊಸದಾಗಿ ದೇವಾಲಯಗಳನ್ನು

ಕಟ್ಟಿಸಿದಂತೆಯೇ ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಲು ಮತ್ತು ಅವುಗಳನ್ನು ವಿಸ್ತರಿಸುವುದಕ್ಕೂ ಈ ಸಾಮ್ರಾಜ್ಯದವರು ಹೆಚ್ಚು ಗಮನವನ್ನು ಕೂಟ್ಟಿರುವರು. ವಿಜಯನಗರ ಕಾಲದ ದೇವಾಲಯಗಳ ತಳವಿನ್ಯಾಸ ಹೆಚ್ಚು ವಿಸ್ತಾರವಾಗತೂಡಗಿದವು. ಇವರ ಕಾಲದ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗರ್ಭಗೃಹ, ಪ್ರದಕ್ಷಿಣಪಥ, ಶುಕನಾಸಿ, (ಅಂತರಾಳ) ಅರ್ಧಮಂಟಪ, ನವರಂಗ ಮತ್ತು ಮುಖಮಂಟಗಳಿರುತ್ತವೆ. ನವರಂಗಕ್ಕೆ ಮೂರು ಪ್ರವೇಶ ದ್ವಾರಗಳಿದ್ದು ಪಕ್ಕದಲ್ಲಿರುವ ಪ್ರವೇಶ ದ್ವಾರಗಳು ನವರಂಗಕ್ಕೆ ಚಿಕ್ಕದಾದ ಮಂಟಪಗಳಿಗೆ ಕೂಡಿಸಿರುತ್ತಾರೆ. ದೇವಾಲಯದ ಸುತ್ತಲೂ ನಿರ್ದಿಷ್ಟ ದಿಕ್ಕಿನಲ್ಲಿ ಪರಿವಾರ ದೇವತೆಗಳಿಗೆ ದೇವಾಲಯಗಳು ಇರುತ್ತವೆ. ವಿಶಾಲವಾದ ಪ್ರಕಾರದ ಸುತ್ತಲೂ ಎತ್ತರವಾದ ಗೋಡೆಯಿದು ಪ್ರಕಾರವನ್ನು ಎರಡು ಅಥವಾ ಮೂರು ಕಡೆಗಳಿಂದ ಪ್ರವೇಶಿಸಲು ದ್ವಾರಗಳು ಕಂಡುಬರುತ್ತವೆ.[೨೮] ದ್ವಾರಗಳ ಮೇಲೆ ಎತ್ತರವಾದ ಗೋಪರಗಳನ್ನು ಕಟ್ಟುತ್ತಾರೆ. ಇದು ದೇವಾಲಯದ ವಾಸ್ತುಶಿಲ್ಪಕ್ಕೆ ವಿಜಯನಗರದ ಶಿಲ್ಪಿಗಳು ನೀಡಿದ ಬಹುದೊಡ್ಡ ಕೊಡುಗೆ. ಇದನ್ನೇ ರಾಯಗೋಪುರ ಎಂದು ಕರೆಯುತ್ತಾರೆ. ಕೆಲವು ಬಾರಿ ಇದರ ಎತ್ತರವು ಹನ್ನೊಂದು ಅಂತಸ್ತು ಎತ್ತರವಾಗಿರುತ್ತದೆ[೨೯].

ಈ ಕಾಲದ ಶಿಲ್ಪಿಗಳ ಇನ್ನೂಂದು ಕೂಡುಗೆ ಎಂದರೆ ಮಂಟಪಗಳು. ಧಾರ್ಮಿಕ ಆಚರಣೆಗೆ ತಕ್ಕಂತೆ ವಿವಿಧ ಮಾದರಿ ಮತ್ತು ಗಾತ್ರದ ಮಂಟಪಗಳನ್ನು ದೇವಾಲಯ ಸಂಕೀರ್ಣದ ಭಾಗವಾಗಿ ಕಾಣಬಹುದು. ವಿಜಯನಗರ ಕಾಲದಲ್ಲಿ ಗ್ರಾನೈಟ್ ಶಿಲೆಯನ್ನು (ಕಣಶಿಲೆ) ದೇವಾಲಯಗಳ ನಿರ್ಮಾಣಕ್ಕೆ ಬಳಸಿದರು. ಇವರ ಕಾಲದಲ್ಲಿ ಸ್ಥಳೀಯವಾಗಿ ಗ್ರಾನೈಟ ಶಿಲೆಗಳು ಅಪಾರ ಪ್ರಮಾಣದಲ್ಲಿ ದೂರೆಯುತ್ತಿದ್ದು ಅವುಗಳನ್ನು ಹೆಚ್ಚು ಬಳಸಿರುವುದನ್ನು ಕಾಣಬಹುದು. ಸೂಕ್ಷ್ಮ ಕೆತ್ತನಗೆ ಅವಕಾಶವಿರುವುದಿಲ್ಲ. ವಿಜಯನಗರದ ದೇವಾಲಯಗಳು ಎತ್ತರವಾದ ಅಧಿಷ್ಠಾನವನ್ನು ಹೂಂದಿರುತ್ತವೆ. ಹಂಪಿಯ ಹಜರರಾಮ, ವಿಠಲ ದೇವಾಲಯಗಳಲ್ಲಿಯ ಅಧಿಷ್ಠಾನ ವಿವಿಧ ಭಾಗಗಳನ್ನು ಹೂಂದಿದೆ. ವಿಜಯನಗರದ ದೇವಾಲಯಗಳು ಗರ್ಭಗೃಹ ಸಾಮಾನ್ಯವಾಗಿ ಚೌಕಾರವಾಗಿರುತ್ತದೆ. ಆದರೆ ಕೆಲವು ದೇವತೆಗಳಿಗೆ ನಿರ್ಮಿಸಿದ ದೇವಾಲಯಗಳು ಆಯತಾಕಾರವಾಗಿರುತ್ತದೆ. [೩೦] ಹಂಪಿಯ ಪರಿಸರದಲ್ಲಿರುವ ಅನಂತಶಯನ ದೇವಾಲಯ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಇದರ ಕಾಲದ ಕಂಬನಗಳಲ್ಲಿನ ಪುಷ್ಪಬೋದಿಗೆಯು ಹೆಚ್ಚು ಬಾಗಿದ್ದು ಅಲಂಕೃತವಾಗಿರುತ್ತದೆ. ಅಲ್ಲದೆ ಸಂಗೀತ ಕಂಬಗಳು ಮತ್ತೊಂದು ಪ್ರಕಾರದ

ಕಂಬಗಳಾಗಿವೆ. ಇದರೊಂದಿಗೆ ಅಶ್ವಸ್ತಂಭ, ಯಾಳಿಸ್ತಂಭ ವಿವಿಧ ಮಾದರಿ ಸ್ತಂಭಗಳನ್ನು ರಚಿಸಿದರು. ವಿಜಯನಗರದ ಕಾಲದ ಪ್ರಮುಖ ದೇವಾಲಯಗಳೆಂದರೆ ವಿರೂಪಾಕ್ಷ ದೇವಾಲಯ, ಹಜಾರರಾಮಸ್ವಾಮಿ ದೇವಾಲಯ, ಅನಂತಶಯನ ದೇವಾಲಯ, ವಿಜಯ ವಿಠಲ ಸ್ವಾಮಿ ದೇವಾಲಯ. ಕಂಚಿಯ ಏಕಾಂಬರೇಶ್ವರ ಮತ್ತು ಮಧುರೆಯ ಮೀನಾಕ್ಷಿ ದೇವಾಲಯ.

ವಿಜಯನಗರ ಪತನಾನಂತರ ಕರ್ನಾಟಕದ ವಾಸ್ತು ನಿರ್ಮಿತಿಗಳು ಕ್ಷೀಣಿಸಿದವು. ಬಹುಮನಿ ಮತ್ತು ಆದಿಲಷಾಹಿಗಳ ಪ್ರಭಾವದಿಂದ ಹಿಂದೂ ಮುಸ್ಲಿಂ ಶೈಲಿಯ ಬಳಕೆಗೆ ಬಂದಿತು. ಪಾಳೆಗಾರರ ಕಾಲದಲ್ಲಿದ್ದ ರಾಜಕೀಯ ಅಭದ್ರತೆ ಆರ್ಥಿಕ ಪರಿಸ್ಥಿತಿ ಮುಂತಾದ ಕಾರಣಗಳಾಗಿ ದೇವಾಲಯ ವಾಸ್ತುಶೈಲಿಯು ಸರಳಗೂಂಡಿತು.[೩೧]

## ಅಡಿಟಿಪ್ಪಣಿಗಳು

೧. ಅಪರ್ಣ ಕೂ.ಸ. **ದೇವಾಲಯ ವಾಸ್ತುಶಿಲ್ಪ ಪರಿಚಯ** ಪು.೧

೨. ಗೋಪಾಲ ಬಾ.ರಾ.**ಕರ್ನಾಟಕದ ಕಲೆಗಳು ವಾಸ್ತು,** ಸಂ.೪, ಪು.೧-೨

೩. ಪ್ರಭಾಕರ್ ಎಂ.ಎನ್. **ದೇವಾಲಯ ವಾಸ್ತು ಚಂದ್ರಿಕೆ,** ಪು.೧

೪. ಗೋಪಾಲ ಬಾರಾ, **ಪೂರ್ವೋಕ್ತ,** ಪು.೧

೫. ರಮೇಶ ನಾಯಕ, **'ವಾಸ್ತು ಮತ್ತು ಮೂರ್ತಿಶಿಲ್ಪ,'** ಕುರುಗೋಡು ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೧,ಬಾಲಸುಬ್ರಮಣ್ಯ, (ಸಂ.),ಪು.೮೮

೬. ಸುರೇಶ ಕೆ.ಎಂ. ಮತ್ತು ಇತರರು, **ಕರ್ನಾಟಕ ದೇವಾಲಯಗಳ ಕೋಶ ಕೂಪ್ಪಳ ಜಿಲ್ಲೆ,** ಪು.XIV

೭. ಜ್ಞಾನಾನಂದ ಜಿ,ಶಿಲ್ಪಾದರ್ಶ, ಸಂ.೨, ಪು.೭

೮. ಸುರೇಶ ಕೆ.ಎಂ. ಮತ್ತು ಇತರರು, **ಪೂರ್ವೋಕ್ತ** ಪು.XV

೯. ಜ್ಞಾನಾನಂದ ಜಿ, ಪೂರ್ವೋಕ್ತ, ಪು.೧೬

೧೦. **ಅದೇ,** ೧೬

೧೧. **ಅದೇ,** ೨೩

೧೨. **ಅದೇ,** ಪು.೩೯

೧೩. **ಅದೇ,** ಪು.೮೮–೮೯

೧೪. ಸುರೇಶ ಕೆ.ಎಂ. ಮತ್ತು ಇತರರು, ಪೂರ್ವೋಕ್ತ ಪು· XVI

೧೫. ತಿಪ್ಪೇರುದ್ರಸ್ವಾಮಿ ಎಚ್, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪು. ೫೫೪

೧೬. ರಾಜಶೇಖರ ಎಸ್, ಕರ್ನಾಟಕದ **ವಾಸ್ತುಶಿಲ್ಪ ಮತ್ತು ಚಿತ್ರಕಲೆ,** ಪು. ೬–೮

೧೭. ರಘುನಾಥ ಭಟ್ ಎಚ.ಆರ್. **'ಆದಿಕದಂಬ ವಾಸ್ತು, ಶಿಲ್ಪಕಲೆ',** ಶಿಲ್ಪಕಲಾ ಪ್ರಪಂಚ,

೧೮. ತಿಪ್ಪೇಸ್ವಾಮಿ, ಪಿ.ಆರ್.(ಸಂ.)ಪು. ೧೪೭–೧೪೮

೧೯. ರಾಜಶೇಖರ, ಎಸ್, **ಪೂರ್ವೋಕ್ತ,** ಪು. ೧೫–೧೭

೨೦. ತಿಪ್ಪೇರುದ್ರ ಸ್ವಾಮಿ ಎಚ್, **ಪೂರ್ವೋಕ್ತ** ಪು. ೫೩೪

೨೧. ರಾಜಶೇಖರ ಎಸ್, **ಪೂರ್ವೋಕ್ತ,** ಪು.೧೨–೧೩

೨೨. ಶೀಲಾಕಾಂತ ಪತ್ತಾರ, **ಬಾದಾಮಿ,** ಪು. ೧೩, ೨೭

೨೩. ರಾಜಶೇಖರ ಎಸ್, **ಪೂರ್ವೋಕ್ತ,** ಪು.೯೩–೧೧೨

೨೪. ಜ್ಞಾನಾನಂದ ಜಿ**ಪೂರ್ವೋಕ್ತ** ಪು. ೧೬೫

೨೫. ಕರ್ನಾಟಕದ **ಸಾಂಸ್ಕೃತಿಕ ಪರಂಪರೆ,** ಪು. ೩೯–೪೦

೨೬. ಜ್ಞಾನಾನಂದ ಜಿ, **ಪೂರ್ವೋಕ್ತ** ಪು.೧೬೫

೨೭. ರಾಜಶೇಖರ ಎಸ್. **ಪೂವೋಕ್ತ** ಪು. ೧೩೨-೧೩೪

೨೮. ಜ್ಞಾನಾನಂದ ಜಿ, **ಪೂವೋಕ್ತ,** ಪು. ೧೬೬-೧೯೭

೨೯. ರಾಜಶೇಖರ ಎಸ್ ಪೂರ್ವೋಕ್ತ, ಪು. ೧೭೪

೩೦. ಜ್ಞಾನಾನಂದ ಜಿ, **ಪೂರ್ವೋಕ್ತ,** ಪು. ೧೯೮

೩೧. ರಾಜಶೇಖರ ಎಸ್, **ಪೂರ್ವೋಕ್ತ,** ಪು. ೧೭೭-೧೨೨

***

## ಶೈವ ದೇವಾಲಯಗಳು

### ೧. ಆನಂದೇಶ್ವರ ದೇವಾಲಯ

ರಾಯಚೂರಿನ ದೇವಾಲಯಗಳಲ್ಲಿ ಒಂದಾದ ಆನಂದೇಶ್ವರ ದೇವಾಲಯವು ಗಾಜಗಾರಪೇಟೆಯ ಉತ್ತರಾಧಿಮಠದ ಎದುರುಗಡೆ ಇದೆ. ವಿಜಯನಗರದ ಕಾಲದ ದೇವಾಲಯವೆಂದು ಗುರುತಿಸಬಹುದಾಗಿದೆ. ಅಧಿಷ್ಠಾನದಿಂದ ಮೇಲ್ಭಾವಣಿಯವರೆಗೆ ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಶಿಖರವು ಗಚ್ಚು ಮತ್ತು ಗಾರೆಗಳಿಂದ ಆವೃತ್ತವಾಗಿದೆ. ಉತ್ತರಾಭಿಮುಖವಾಗಿರುವ ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳಿಂದ ಕೂಡಿದೆ. ಗರ್ಭಗೃಹದಲ್ಲಿರುವ ಶಿವಲಿಂಗವು ೩ ಅಡಿ ಎತ್ತರವಿದೆ. ಈ ಶಿವಲಿಂಗವನ್ನು ಕಾಶಿಯಿಂದ ತಂದು ಪ್ರತಿಷ್ಠಾಪಿಸಲಾಗಿದೆ ಎಂಬ ಪ್ರತೀತ ಇದೆ. ಗರ್ಭಗೃಹದ ಬಾಗಿಲುವಾಡವು ಸಾದಾ ಕೆತ್ತನೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಹೂವಿನ ಕೆತ್ತನೆ ಇದೆ. ನವರಂಗದ ಕಂಬಗಳ ರಚನೆಯು ಕಾಂಡಭಾಗದಲ್ಲಿ ಚಚ್ಚೌಕಾಕಾರವಾಗಿದೆ. ಸಾಧಾರಣವಾದ ಬೋದಿಗೆಯನ್ನು ಕಾಣಬಹುದು. ನವರಂಗದಲ್ಲಿಯ ಮೇಲ್ಭಾವಣಿಯಿಂದ ಕಲ್ಲಿನ ಸರಪಳಿಯಂತೆ

ಇಳಿಬಿಟ್ಟಿರುವ ಸರಪಳಿಗಳನ್ನು ಕಾಣಬಹುದು. ಅಧಿಷ್ಠಾನದ ಒಂದು ಭಾಗದಲ್ಲಿ ಮಾತ್ರ ಸಿಂಹ ಮತ್ತು ಪಕ್ಷಿಯ ಶಿಲ್ಪಗಳನ್ನು ಕೆತ್ತಲಾಗಿದೆ.

ಈ ದೇವಾಲಯಕ್ಕೆ ಸುಸ್ಥಿತಿಯ ತ್ರಿತಲ ಶಿಖರವಿದೆ. ಅಲ್ಲಿನ ಶಿಲ್ಪಗಳು ಭಗ್ನಗೊಂಡಿವೆ. ದೇವಾಲಯದ ಮೇಲ್ಛಾವಣಿಯಲ್ಲಿ ನಾಲ್ಕ ದಿಕ್ಕುಗಳಲ್ಲಿ ನಂದಿಶಿಲ್ಪವನ್ನು ಇರಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವನ್ನು ಎತ್ತರವಾಗಿರುವ ಕಟ್ಟೆಯ ಮೇಲೆ ನಿಲ್ಲಿಸಲಾಗಿದೆ. ವಿಶಾಲವಾದ ಪ್ರಾಕಾರವನ್ನು ಹೊಂದಿದೆ. ದೇವಾಲಯದ ಪ್ರದೇಶ ದ್ವಾರದಲ್ಲಿ ದ್ವಾರ ಗೋಪುರವಿದೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ತ್ರಿತಲ ಶಿಖರವಿದೆ. ವಿಜಯನಗರ ಕಾಲದ ದೇವಾಲಯಗಳ ಎಲ್ಲ ಲಕ್ಷಣಗಳನ್ನು ಇದು ಹೊಂದಿದೆ. ಕ್ರಿ.ಶ. ೧೫–೧೬ನೇ ಶತಮಾನ ರಚನೆಯಾಗಿದೆ.

### ೨. ಈಶ್ವರ ದೇವಾಲಯ

ರಾಯಚೂರಿನಿಂದ ೭ ಕಿ.ಮೀ. ದೂರದಲ್ಲಿರುವ ಉಪ್ಪರಾಳನಲ್ಲಿರುವ ಈಶ್ವರ ದೇವಾಲಯವು ಪೂರ್ವಾಭಿಮುಖವಾಗಿದೆ. ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಶಿವಲಿಂಗವನ್ನು ಕಾಣಬಹುದು. ಗರ್ಭಗೃಹದ ಬಾಗಿಲುವಾಡವು ಸಾದಾ ಕೆತ್ತನೆಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಹೂ, ಸೂರ್ಯ ಮತ್ತು ಚಂದ್ರ ಇವುಗಳನ್ನು ಹೊಂದಿದೆ. ಶೈವ ದ್ವಾರಪಾಲಕರು ತ್ರಿಶೂಲ, ಢಮರುಗಳನ್ನು ಹಿಡಿದಿದ್ದಾರೆ. ನವರಂಗದಲ್ಲಿನ ಕಂಬಗಳ ರಚನೆಯು ಪೀಠ, ಕಾಂಡದ ಚೌಕಾಕಾರವಾದ ಭಾಗ, ಸಾದಾ ಬೋಧಿಗೆಗಳು ಇವೆ. ದೇವಾಲಯದ ಎದುರುಗಡೆ ದೀಪಸ್ತಂಭವನ್ನು ನಿಲ್ಲಿಸಲಾಗಿದೆ. ಸುತ್ತಲೂ ಪ್ರಾಕಾರ ಗೋಡೆಯನ್ನು ಹೊಂದಿದೆ. ಶಿಖರವು ಸುಸ್ಥಿಯಲ್ಲಿದೆ. ಶಿಖರದಲ್ಲಿ ವಿವಿಧ ರೀತಿಯ ಶಿಲ್ಪಗಳನ್ನು ಕಾಣಬಹುದು.

### ೩. ಈಶ್ವರ ದೇವಾಲಯ

ರಾಯಚೂರಿನಿಂದ ನಾಲ್ಕು ಕಿ.ಮೀ. ದೂರದಲ್ಲಿರುವ ನಾಗಲಾಪುರದ ಈಶ್ವರ ದೇವಾಲಯವು ಅಗಸಿಯ ಮುಂಭಾಗದಲ್ಲಿದೆ. ಇದು ಪೂರ್ವಾಭಿಮುಖವಾಗಿದೆ. ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಮತ್ತು ತೆರೆದ ಮಂಟಪವನ್ನು ಹೊಂದಿದೆ.

ಗರ್ಭಗೃಹದಲ್ಲಿ ಸ್ಫಟಿಕ ರೂಪದ ಶಿವಲಿಂಗವನ್ನು ಕಾಣಬಹುದು. ಇದು ಸ್ವಯಂಭು ಲಿಂಗವಾಗಿದೆ. ಗರ್ಭಗೃಹದ ಬಾಗಿಲುವಾಡವು ಸಾದಾ ಕೆತ್ತನೆಗಳಿಂದ ಕೂಡಿದೆ ಲಲಾಟಬಿಂಬದಲ್ಲಿ ಕೆತ್ತನೆಗಳಿಲ್ಲ. ಶಿಖರವನ್ನು ಹೊಂದಿರದ ದೇವಾಲಯವಾಗಿದೆ. ತೆರೆದ ಮಂಟಪದ ಕಂಬಗಳು ಕಟ್ಟಿಗೆಯ ಕಂಬಗಳಾಗಿವೆ. ದೇವಾಲಯವನ್ನು ಪ್ರವೇಶಿಸಲು ೫ ಸೋಪಾನಗಳಿವೆ. ಅಧಿಷ್ಠಾನದ ಭಾಗವು ಸಾದಾ ಇದೆ. ಭಿತ್ತಿಯಲ್ಲಿಯೂ ಯಾವುದೇ ರಚನೆಗಳನ್ನು ಕಾಣುವುದಿಲ್ಲ.

**೪. ಈಶ್ವರ ದೇವಾಲಯ**

ರಾಯಚೂರಿನಿಂದ ಸು. ೬ ಕಿ.ಮೀ. ದೂರದಲ್ಲಿರುವ ಜೆಗರಕಲ್‌ನಲ್ಲಿಯ ಈಶ್ವರ ದೇವಾಲಯವು ಪ್ರಮುಖವಾಗಿದೆ. ಪೂರ್ವಾಭಿಮುಖವಾಗಿದೆ. ಈಶ್ವರ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವು ೨ ಅಡಿ ಎತ್ತರವಿದೆ. ಚೌಕಾಕಾರವಾದ ಗರ್ಭಗೃಹದಲ್ಲಿ ಅಲಂಕರಣೆಯ ದ್ವಾರ ಶಾಖೆಯನ್ನು ಹೊಂದಿದೆ. ಲತೆಯ ಸುರಳುಗಳಿಂದ ಅಲಂಕೃತವಾಗಿದೆ. ಲಲಾಟದಲ್ಲಿ ಗಜಲಕ್ಷ್ಮಿಯನ್ನು ಹೊಂದಿದೆ. ಅಂತರಾಳದಲ್ಲಿ ನಂದಿಯ ಶಿಲ್ಪವಿದೆ.

ನವರಂಗದಲ್ಲಿ ಸ್ವತಂತ್ರವಾದ ನಾಲ್ಕ ಕಂಬಗಳು ಪೀಠಕಾರದ ಬೋಧಿಗೆಗಳನ್ನು ಹೊಂದಿದೆ. ನವರಂಗದ ಗೋಡೆಗಳಲ್ಲಿ ದೇವಕೋಷ್ಠಕಗಳು ಇವೆ. ಅವುಗಳು ಖಾಲಿಯಾಗಿವೆ. ಈ ದೇವಾಲಯದಲ್ಲಿ ಕಕ್ಷಾಸನದ ವ್ಯವಸ್ಥೆಯನ್ನು ಮಾಡಲಾಗಿದೆ. ನವರಂಗದಲ್ಲಿ ಭುವನೇಶ್ವರಿ ಇದೆ. ಕಕ್ಷಾಸನದ ಕಂಬಗಳು ಅರ್ಧಗಂಬಗಳಂತೆ ರಚಿಸಿ ಅವುಗಳನ್ನು ಮೇಲ್ಛಾವಣಿಯಂತೆ ರಚಿಸಿರುವುದರಿಂದ ಇದನ್ನು ಡಬ್ಬಗಲ್ಲ ದೇವಾಲಯವೆಂದು ಕರೆಯಲಾಗುತ್ತದೆ.

**೫. ಚಂದ್ರಮೌಳೇಶ್ವರ ದೇವಾಲಯ**

ಚಂದ್ರಮೌಳೇಶ್ವರ ದೇವಾಲಯವು ರಾಯಚೂರಿನ ಮಾಹಾಬಲೇಶ್ವರ ವೃತ್ತದ ಎಡರಸ್ತೆಯಲ್ಲಿದೆ. ಈ ದೇವಾಲಯವು ಪೂರ್ವಭಿಮುಖವಾಗಿದೆ ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳನ್ನು ಹೊಂದಿದೆ.

ಗರ್ಭಗೃಹದಲ್ಲಿ ಶಿವಲಿಂಗವನ್ನು ಕಾಣಬಹುದಾಗಿದೆ. ಗರ್ಭಗೃಹದ ಬಾಗಿಲಾವಾಡವು ಸಾದಾ ಕೆತ್ತನೆಗಳಿಂದ ಕೂಡಿದೆ. ಲಲಾಟಬಿಂಬವು ಸಾಧಾರಣವಾಗಿದೆ. ನವರಂಗದಲ್ಲಿ ನಂದಿಶಿಲ್ಪವನ್ನು ಕಾಣಬಹುದಾಗಿದೆ. ನವರಂಗದ ಎಡಭಾಗದಲ್ಲಿ ಗಣೇಶನ ಶಿಲ್ಪವನ್ನು ಇರಿಸಲಾಗಿದೆ. ಶಿಖರವನ್ನು ಹೊಂದಿದೆ. ಶಿಖರದಲ್ಲಿ ಹಲವು ಶಿಲ್ಪಗಳನ್ನು ಕಾಣಬಹುದು. ದೇವಾಲಯದ ಕೆಲವು ಭಾಗಗಳನ್ನು ನವೀಕರಿಸಿ ಸುಣ್ಣವನ್ನು ಬಳಿಯಲಾಗಿದೆ.

### ೬. ನಗರೇಶ್ವರ ದೇವಾಲಯ

ಪೂರ್ವಾಭಿಮುಖವಾಗಿರುವ ನಗರೇಶ್ವರ ದೇವಾಲಯವು ರಾಯಚೂರಿನಲ್ಲಿರುವ ಹನುಮಾನ ಟಾಕೀಸ್ ಹತ್ತಿರ ಇದೆ. ಇದು ಗರ್ಭಗೃಹದ ಬಾಗಿಲವಾಡವು ಹೂಬಳ್ಳಿಗಳಿಂದ ಅಲಂಕೃತವಾಗಿದೆ ಲಲಾಟದಲ್ಲಿ ಹೂವಿದೆ. ಶೈವ ದ್ವಾರಪಾಲಕರು ತ್ರಿಶೂಲ ಢಮರುಗಳನ್ನು ಹೊಂದಿದ್ದಾರೆ. ಶಿಖರವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವು ೨ ಅಡಿ ಎತ್ತರವಾಗಿದೆ. ಈ ದೇವಾಲಯವು ವಿಜಯನಗರದ ಕಾಲದ ದೇವಾಲಯವೆಂದು ಗುರುತಿಸಬಹುದಾಗಿದೆ. ನವರಂಗದಲ್ಲಿ ಕಂಬಗಳು ರಚನೆಯಲ್ಲಿ ಚೌಕಾಕಾರವಾದ ಕಂಬಗಳಿವೆ.

### ೭. ಬಸವಣ್ಣನ ಗುಡಿ

ಮಂತ್ರಾಲಯ ರಸ್ತೆಯಲ್ಲಿ ಇರುವ ಯರಗೇರಾಕೆರೆಯ ಬಸವಣ್ಣನ ಗುಡಿಯು ಪೂರ್ವಾಭಿಮುಖವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ ಅದರಲ್ಲಿ ೨ ಅಡಿ ಎತ್ತರದ ಲಿಂಗವಿದೆ ಬಾಗಿಲುವಾಡವು ಸಾದಾ ಅಲಂಕರಣೆಯನ್ನು ಹೊಂದಿದೆ. ಲಲಾಟವು ಸಾದಾ ಇದೆ. ಅಂತರಾಳದಲ್ಲಿ ಕಡಿಮೆ ಅಲಂಕರಣೆಗಳಿವೆ. ಶೈವ ದ್ವಾರಪಾಲಕರು ತ್ರಿಶೂಲ ಮತ್ತು ಢಮರುಗಳನ್ನು ಹೊಂದಿದ್ದಾರೆ.

### ೮. ಬಸವೇಶ್ವರ ದೇವಸ್ಥಾನ

ರಾಯಚೂರಿನಿಂದ ೧೫.ಕಿ.ಮೀ ದೂರದಲ್ಲಿರುವ ಸುಲ್ತಾನಪುರವು ರಾಯಚೂರಿನ ಪಶ್ಚಿಮ ಭಾಗದಲ್ಲಿದೆ. ಬಸವೇಶ್ವರ ದೇವಾಲಯವು ಅಗಸಿಯ ಮುಂಭಾಗದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ

ಮತ್ತು ನವರಂಗಗಳ ಹೊಂದಿದೆ. ಗರ್ಭಗೃಹದಲ್ಲಿ ೨ ಅಡಿ ಎತ್ತರವಿರುವ ಶಿವಲಿಂಗವನ್ನು ಕಾಣಬಹುದಾಗಿದೆ ಪಕ್ಕದಲ್ಲಿಯೇ ಎರಡು ಚಿಕ್ಕ ಲಿಂಗಗಳನ್ನು ನೋಡಬಹುದು. ಗರ್ಭಗೃಹದ ಬಾಗಿಲುವಾಡವು ಹೂಬಳ್ಳಿಯ ಅಲಂಕರಣೆಯಿಂದ ಕೂಡಿದೆ. ಅಂತರಾಳದಲ್ಲಿ ಎರಡು ಕಂಬಗಳು ಇವೆ. ಆ ಕಂಬಗಳಲ್ಲಿ ಸ್ತ್ರೀಯ ಶಿಲ್ಪಗಳಿವೆ ಅದರ ಮುಂದಿನ ಎರಡು ಕಂಬಗಳಲ್ಲಿ ಶೈವ ದ್ವಾರಪಾಲಕರು ತ್ರಿಶೂಲ ಢಮರುಗಳನ್ನು ಹೊಂದಿದ್ದಾರೆ. ಮಕರತೋರಣವು ಬಹುಸುಂದರ ಕೆತ್ತನೆಯಿಂದ ಕೂಡಿದೆ. ನವರಂಗದ ನಾಲ್ಕು ಕಂಬಗಳು ಕೆತ್ತನೆಯಿಂದ ಕೂಡಿದೆ. ಪಟ್ಟಿಕೆಗಳನ್ನು ಹೊಂದಿರುವ ಕಂಬಗಳಾಗಿವೆ. ಅಂತರಾಳದಲ್ಲಿ ದೊಡ್ಡದಾದ ನಂದಿಯ ಶಿಲ್ಪವಿದೆ. ದೇವಾಲಯದ ಮೇಲ್ಛಾವಣೆಯಲ್ಲಿ ನಕ್ಷತ್ರಾಕಾರದ ಕೆತ್ತನೆಯೊಳಗೆ ಹೂವಿನ ಅಲಂಕರಣೆಯಿದೆ. ನವರಂಗದಲ್ಲಿ ನಾಲ್ಕ ಕಂಬಗಳು ದುಂಡಾಗಿವೆ. ಆದರೆ ಎರಡು ಕಂಬಗಳ ಬೊದಿಗೆಯ ಮೇಲೆ ಬಾಣದ ತುದಿಯನ್ನು ಹೊಂದಿದೆ. ಇದು ಕಲ್ಯಾಣ ಚಾಳುಕ್ಯರ ಕಾಲದ ದೇವಾಲಯವಾಗಿದೆ.

**೯. ಭೋಗೇಶ್ವರ ದೇವಾಲಯ (ಕ್ರಿ.ಶ. ೧೧೪೯)**

ರಾಯಚೂರಿನಿಂದ ಸುಮಾರು ಒಂಭತ್ತು ಕಿ.ಮೀ ದೂರದಲ್ಲಿರುವ ಕಲ್ಮಾಲವು ಪಶ್ಚಿಮ ಭಾಗದಲ್ಲಿದೆ. ಊರಿನ ಹೊರಭಾಗದಲ್ಲಿರುವ ಈ ಭೋಗೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ ಹಾಗು ಅರ್ಧಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವು ಒಂದುಅಡಿ ಎತ್ತರವಿದೆ. ಬಾಗಿಲವಾಡವು ಸಾದಾ ಇದೆ. ಲಲಾಟದಲ್ಲಿ ಹೂವಿನ ಕೆತ್ತನೆ ಇದೆ. ಸೂರ್ಯ ಚಂದ್ರವಿರುವರು. ಅರ್ಧಮಂಟಪದಲ್ಲಿ ನಂದಿಯ ಶಿಲ್ಪವನ್ನು ಇರಿಸಲಾಗಿದೆ. ದೇವಾಲಯವನ್ನು ಪ್ರವೇಶಿಸಲು ನಾಲ್ಕು ಸೋಪಾನಗಳಿವೆ. ಶಿಖರವನ್ನು ಹೊಂದಿಲ್ಲ. ದೇವಾಲಯದ ಮುಂಭಾಗದಲ್ಲಿ ಶಾಸನವನ್ನು ಇರಿಸಲಾಗಿದೆ. ಈ ಶಾಸನವು ಕಲ್ಯಾಣ ಚಾಳುಕ್ಯರ ದೊರೆಯಾದ ಭೂಲೋಕಮಲ್ಲನ ಕಾಲಕ್ಕೆ ಸೇರಿದೆ ಕ್ರಿ.ಶ. ೧೧೪೯ರಲ್ಲಿ ಐನೂರರ್ವರು ಸ್ವಾಮಿಗಳ ಉಲ್ಲೇಖವಿದ್ದು ಅವರುಗಳು ದಾನ ನೀಡಿದಂತೆ ತಿಳಿದುಬರುತ್ತದೆ.

### ೧೦. ಮಲ್ಲಿಕಾರ್ಜುನ ದೇವಾಲಯ

ರಾಯಚೂರಿನಿಂದ ೧೧ ಕಿ.ಮೀ ದೂರದಲ್ಲಿರುವ ಅಲ್ಕೂರು ಮಲ್ಲಿಕಾರ್ಜುನ ದೇವಾಲಯವು ಪ್ರಾಮುಖ್ಯತೆಯನ್ನು ಪಡೆದಿದೆ. ಅಗಸಿಯ ಮುಂಭಾದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಲಿಂಗ ಮತ್ತು ವಿಷ್ಣು ಮೂರ್ತಿಗಳಿವೆ. ಇದು ವಿಭಿನ್ನವಾದ ದೇವಾಲಯವಾಗಿದೆ. ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಶಿವಲಿಂಗವಿರುವಲ್ಲಿ ವಿಷ್ಣುವಿನ ಶಿಲ್ಪವನ್ನು ಕಾಣುವುದಿಲ್ಲ. ಆದರೆ ಇಲ್ಲಿ ವಿಷ್ಣುವಿದೆ. ಅಂತರಾಳದಲ್ಲಿ ನಂದಿಯನ್ನು ಇರಿಸಲಾಗಿದೆ. ಗರ್ಭಗೃಹದ ಬಾಗಿಲುವಾಡ ಸಾದಾ ಇದೆ. ನವರಂಗದಲ್ಲಿ ಸ್ವತಂತ್ರವಾದ ನಾಲ್ಕ ಕಂಬಳು, ಪೀಠ, ಕಾಂಡ ಬೋದಿಗೆಯನ್ನು ಹೊಂದಿದೆ. ದೇವಾಲಯದ ಆವರಣದಲ್ಲಿ ಹನುಮನ ಪ್ರತಿಮೆ ಇದೆ. ಇದು ಮೊದಲು ಜಿನಾಲಯವಾಗಿತ್ತು ಎಂದು ತಿಳಿಯಬರುತ್ತದೆ. ಭಗ್ನಗೊಂಡಿರುವ ಮೂರ್ತಿಶಿಲ್ಪಗಳು ಮತ್ತು ನಾಗಶಿಲ್ಪಗಳನ್ನು ಹೊರಗಡೆ ಇರಿಸಲಾಗಿದೆ. ಶಿಖರವನ್ನು ಹೊಂದಿದೆ. ಶಿಖರದಲ್ಲಿ ಯತಿ ಶಿಲ್ಪವನ್ನು ಕಾಣಬಹುದಾಗಿದೆ. ಸ್ತೂಪಿಯನ್ನು ಹೊಂದಿದೆ. ಶಿಖರದಲ್ಲಿ ಹಲವು ಬಗೆಯ ಗಾರೆಯ ಶಿಲ್ಪಗಳನ್ನು ಕಾಣಬಹುದಾಗಿದೆ. ಹಳೆಯ ಜೈನ ದೇವಾಲಯವನ್ನು ಶೈವ ದೇವಾಲಯವಾಗಿ ಪರಿವರ್ತಿಸಿದಂತೆ ಕಾಣುತ್ತದೆ. ಆವರಣದಲ್ಲಿ ಪಾಣಿಪೀಠ ಮತ್ತು ನಾಗದೇವತೆಯು ಶಿಲ್ಪಗಳಿವೆ. ವೀರಗಲ್ಲುಗಳು ಇವೆ. ಒಂದೇ ಗರ್ಭಗೃಹದಲ್ಲಿ ವಿಷ್ಣು ಮತ್ತು ಶಿವಲಿಂಗವಿರುವುದು ವಿಶೇಷವಾಗಿದೆ.

### ೧೧. ರಾಮಲಿಂಗೇಶ್ವರ ದೇವಾಲಯ

ರಾಮಲಿಂಗೇಶ್ವರ ದೇವಾಲಯವು ರಾಯಚೂರಿನ ರೈಲ್ವೆ ಪ್ರದೇಶದಲ್ಲಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಾಲಯದ ತಳವಿನ್ಯಾಸದಲ್ಲಿ ಗರ್ಭಗೃಹ ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರವಿರುವ ಶಿವಲಿಂಗವಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ಹೊಂದಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಇದರ ಬಾಗಿಲುವಾಡವು ನಾಲ್ಕು ಶಾಖೆಗಳನ್ನು ಹೊಂದಿದೆ. ಅರ್ಧಗಂಭಗಳು, ಲತಾಸುರುಳಿಗಳು ಚಿಕ್ಕ ಮೂರ್ತಿಗಳನ್ನು ಕಾಣಬಹುದಾಗಿದೆ. ಅಂತರಾಳದ ಬಾಗಿಲುವಾಡದ ಅಲಂಕರಣೆಯು

ಗರ್ಭಗೃಹದ ಬಾಗಿಲುವಾಡದ ರಚನೆಯನ್ನು ಹೊಂದಿದೆ. ಗರ್ಭಗೃಹ ಮತ್ತು ಅಂತರಾಳದಲ್ಲಿ ಶೈವ ದ್ವಾರಪಾಲಕರು ಢಮರು, ತ್ರಿಶೂಲಗಳನ್ನು ಹೊಂದಿದ್ದಾರೆ. ಇಲ್ಲಿ ನಂದಿ ಶಿಲ್ಪವನ್ನು ಇರಿಸಲಾಗಿದೆ. ಗರ್ಭಗೃಹದಲ್ಲಿರುವ ಶಿವಲಿಂಗವು ನೆಲಮಟ್ಟಕ್ಕಿಂತ ಪಾತಾಳದಲ್ಲಿದೆ. ಇದನ್ನು ಪ್ರವೇಶಿಸಲು ನಾಲ್ಕು ಸೋಪಾನಗಳಿವೆ. ಇವುಗಳನ್ನು ಇಳಿದು ಹೋದರೆ ಶಿವಲಿಂಗವನ್ನು ಕಾಣಬಹುದು. ಇದು ಒಂದು ವಿಭಿನ್ನವಾದ ದೇವಾಲಯವಾಗಿದೆ. ಏಕೆಂದರೆ ಗರ್ಭಗೃಹ ಅಂತರಾಳ ಮತ್ತು ನವರಂಗವು ಸಾಮಾನ್ಯವಾಗಿ ಒಂದೇ ನೆಲಮಟ್ಟದಲ್ಲಿರುತ್ತದೆ. ಆದರೆ ಈ ದೇವಾಲಯದಲ್ಲಿ ನವರಂಗ ಮತ್ತು ಅಂತರಾಳದ ಮಟ್ಟಕ್ಕಿಂತ ಸುಮಾರು ೨ ಅಡಿಗಳಷ್ಟು ಕೆಳಗೆ ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದು ೩ ಅಡಿ ಎತ್ತರವಿದೆ. ಗರ್ಭಗೃಹವನ್ನು ಪ್ರವೇಶಿಸಲು ನಾಲ್ಕು ಸೋಪಾನಗಳನ್ನು ಇಳಿದು ಹೋಗಬೇಕಾಗುತ್ತದೆ. ಈ ದೇವಾಲಯವು ವಿಭಿನ್ನ ರೀತಿಯ ತಳವಿನ್ಯಾಸವನ್ನು ಹೊಂದಿದೆ.

### ೧೨. ರಾಮಲಿಂಗೇಶ್ವರ ದೇವಾಲಯ

ಇಡಪನೂರು ರಾಯಚೂರಿನಿಂದ ಹದಿಮೂರು ಕಿ.ಮೀ. ದೂರದಲ್ಲಿದೆ. ರಾಯಚೂರಿನ ದಕ್ಷಿಣ ಭಾಗದಲ್ಲಿದೆ. ಕಲ್ಯಾಣ ಚಾಳುಕ್ಯರ ಕಾಲದ ಪ್ರಮುಖವಾದ ತ್ರಿಕೂಟ ದೇವಾಲಯವಾಗಿದೆ. ಮೂರು ಗರ್ಭಗೃಹಗಳು ಇವೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಪೂರ್ವ, ಉತ್ತರ, ದಕ್ಷಿಣ ಭಾಗದಲ್ಲಿ ಗರ್ಭಗೃಹಗಳು ಇವೆ. ಪೂರ್ವಕ್ಕೆ ಚೆನ್ನಕೇಶವನ ವಿಗ್ರಹವಿದೆ. ಉತ್ತರದಲ್ಲಿ ಈಶ್ವರ, ದಕ್ಷಿಣಕ್ಕೆ ಪಾರ್ವತಿ ಗರ್ಭಗೃಹಗಳು ಇವೆ. ೩ ಅಂತರಾಳಗಳು ಒಂದೇ ನವರಂಗವನ್ನು ಹೊಂದಿದೆ. ಗರ್ಭಗೃಹದ ಬಾಗಿಲುವಾಡವು ಚಿತ್ತಾಕರ್ಷಕವಾಗಿದೆ. ಪಂಚಶಾಖೆಗಳಿಂದ ಕೂಡಿದೆ. ಪದ್ಮಶಾಖೆ, ವಜ್ರಶಾಖೆ, ಲಲಾಸುರಳಿ ಬಳ್ಳಿಗಳು ಮತ್ತು ಮೂರ್ತಿಗಳಿಂದ ಕೂಡಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ನವರಂಗದ ನಾಲ್ಕು ಕಂಬಗಳು ರಚನೆಯಲ್ಲಿ ಚೌಕಾಕಾರವಾಗಿವೆ. ಪಟ್ಟಿಕೆಗಳು, ಉಬ್ಬುಶಿಲ್ಪಗಳು, ಶಿವಲಿಂಗಗಳು, ಕಾಮಧೇನು, ಶಿವಲಿಂಗದ ಮೇಲೆ ಹಾಲೆರೆಯುವ ಶಿಲ್ಪಗಳಿವೆ. ಕಂಬವು ಪೀಠದ ಬೋದಿಗೆಯನ್ನು ಹೊಂದಿದೆ. ನವರಂಗವು ಭುವನೇಶ್ವರಿಯನ್ನು ಹೊತ್ತಿದೆ. ಭಗ್ನವಾಗಿರುವ ಮೂರ್ತಿಗಳನ್ನು ದೇವಾಲಯದ ಕಟ್ಟೆಯ ಮೇಲೆ ಇರಿಸಲಾಗಿದೆ. ನಂತರ ದೇವಾಲಯದಲ್ಲಿ ಹೊಸದಾದ ಮೂರ್ತಿಗಳನ್ನು

ಪ್ರತಿಷ್ಠಾಪಿಸಲಾಗಿದೆ. ಮೊದಲನೆಯ ಗರ್ಭಗೃಹದಲ್ಲಿ ಚೆನ್ನಕೇಶವನ ಮೂರ್ತಿ ಇದೆ. ಅಂತರಾಳದ ಬಾಗಿಲುವಾಡಗಳ ಕೆಳಭಾಗದಲ್ಲಿ ವೈಷ್ಣವ ದ್ವಾರಪಾಲಕರು ಶಂಖ, ಚಕ್ರ, ಗದೆಗಳನ್ನು ಹಿಡಿದಿದ್ದಾರೆ. ಗರ್ಭಗೃಹದಲ್ಲಿ ಈಶ್ವರ(ಲಿಂಗ)ವಿದೆ. ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕರು ತ್ರಿಶೂಲ ಢಮರುಗಳನ್ನು ಹೊಂದಿದ್ದಾರೆ. ದಕ್ಷಿಣ ಭಾಗದಲ್ಲಿ ಪಾರ್ವತಿಯ ಶಿಲ್ಪವನ್ನು ಇರಿಸಲಾಗಿದೆ. ಇಲ್ಲಿಯ ಶೈವ ದ್ವಾರಪಾಲಕರು ತ್ರಿಶೂಲ, ಢಮರುಗಳನ್ನು ಹಿಡಿದಿದ್ದಾರೆ. ನವರಂಗದಲ್ಲಿ ದೇವಕೊಷ್ಠಕಗಳವು ಇವೆ. ಕ್ರಮವಾಗಿ ಇವುಗಳಲ್ಲಿ ನಂದಿ ಮತ್ತು ಗಣೇಶನ ಶಿಲ್ಪವನ್ನು ಇರಿಸಲಾಗಿದೆ. ಈ ದೇವಾಲಯಗಳನ್ನು ಪ್ರವೇಶಿಸಲು ಒಂದೇ ಒಂದು ಮುಖ್ಯದ್ವಾರವಿದೆ. ಪ್ರವೇಶದಲ್ಲಿ ಸುರಳಿಯಾಕಾರವನ್ನು ನಿರ್ಮಿಸಿದ್ದಾರೆ. ನಾಲ್ಕು ಸೋಪಾನಗಳನ್ನು ಏರಿ ಮೇಲೆ ಹೋಗಬಹುದಾಗಿದೆ. ದೇವಾಲಯದ ಅಧಿಷ್ಠಾನದ ಭಾಗವು ಕೆತ್ತನೆಗಳಿಂದ ಕೂಡಿದೆ. ಆನೆಯ ಸಾಲುಗಳು, ಹೂಗಳ ಸಾಲು, ಭಿತ್ತಿಯಲ್ಲಿ ಅರೆಗಳಿಂದ ಪ್ರಸ್ತರದವರೆಗೂ ಬಂದಿದೆ. ಗಂಬ ದೇವಾಲಯವು ನಾಗರಶೈಲಿಯಲ್ಲಿದ್ದು ಮೂರು ಗರ್ಭಗೃಹಗಳ ಮೇಲೆ ಶಿಖರವನ್ನು ಕಾಣಬಹುದಾಗಿದೆ.

## ೧೩. ರಾಮಲಿಂಗೇಶ್ವರ ದೇವಾಲಯ

ಕೆರೆಬೋದುರು ರಾಮಲಿಂಗೇಶ್ವರ ದೇವಾಲಯವು ಪ್ರಮುಖವಾದ ದೇವಾಲಯವಾಗಿದೆ. ಊರಿನ ಹಿಂಭಾಗದಲ್ಲಿದೆ. ರಾಯಚೂರಿನಿಂದ ಸುಮಾರು ೬ ಕಿ.ಮೀ ದೂರದಲ್ಲಿದೆ. ಪೂರ್ವಾಭಿಮುಖವಾಗಿರುವ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ ಅಂತರಾಳವನ್ನು ಮಾತ್ರ ಹೊಂದಿದೆ. ಗರ್ಭಗೃಹದಲ್ಲಿ ಎರಡು ಲಿಂಗಗಳಿವೆ. ಅವುಗಳು ಅಕ್ಕಪಕ್ಕದಲ್ಲಿವೆ. ಒಂದು ಲಿಂಗವು ಕಪ್ಪುಶಿಲೆಯದ್ದಾಗಿದೆ. ಇದು ಚಿಕ್ಕದಾದ ಲಿಂಗವಾಗಿದೆ. ಆದರೆ ಇನ್ನೊಂದು ಕೆಂಪುಶಿಲೆಯಿಂದ ಕೂಡಿದ ಲಿಂಗವಾಗಿದೆ. ಎರಡು ಲಿಂಗಗಳು ನೆಲಮಟ್ಟದಲ್ಲಿವೆ. ದೊಡ್ಡದಾದ ಶಿವಲಿಂಗವಾಗಿದೆ. ಗರ್ಭಗೃಹದ ಎದುರುಗಡೆ ೨ ನಂದಿಯ ಶಿಲ್ಪಗಳನ್ನು ಇರಿಸಲಾಗಿದೆ. ಅವುಗಳು ಭಗ್ನವಾಗಿದೆ ದೇವಾಲಯದ ಎದುರುಗಡೆ ಎಂಬ ದೀಪಸ್ತಂಭಗಳನ್ನು ನಿಲ್ಲಿಸಲಾಗಿದೆ. ಈ ದೇವಾಲಯದ ವಿಶೇಷವೆಂದರೆ ಅರ್ಧಮಂಟಪದಲ್ಲಿ ಎರಡು ನಂದಿಗಳು, ಎರಡು ದೀಪಸ್ತಂಭ ಹಾಗೂ ಎರಡು ಲಿಂಗಗಳನ್ನು ಈ ದೇವಾಲಯದಲ್ಲಿ ಕಾಣಬಹುದಾಗಿದೆ ಅಧಿಷ್ಠಾನದ ಭಾಗವು ಸಾದಾ

ಇದೆ. ನವರಂಗದ ಕಂಬಗಳಲ್ಲಿ ಯಾವ ಕೆತ್ತನೆಗಳು ಇಲ್ಲ. ಶಿಖರವನ್ನು ಹೊಂದಿರದ ದೇವಾಲಯವಾಗಿದೆ.

### ೧೪. ವೀರಭದ್ರೇಶ್ವರ ದೇವಾಲಯ

ರಾಯಚೂರಿನಿಂದ ಮಟಮಾರಿಯು ೧೯ ಕಿ.ಮೀ.ಗಳು ದೂರದಲ್ಲಿದೆ. ರಾಯಚೂರಿನ ದಕ್ಷಿಣ ಭಾಗದಲ್ಲಿದೆ. ಇಲ್ಲಿನ ವೀರಭದ್ರೇಶ್ವರ ದೇವಾಲಯವು ಪ್ರಾಮುಖ್ಯತೆಯನ್ನು ಪಡೆದ ದೇವಾಲಯವಾಗಿದೆ. ಪೂರ್ವಾಭಿಮುಖವಾಗಿರುವ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಸಾದಾ ಬಾಗಿಲುವಾಡವನ್ನು ಹೊಂದಿದೆ. ಲಲಾಟಬಿಂಬದಲ್ಲಿ ಗಣೇಶ ಶಿಲ್ಪವಿದೆ. ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕರು ತ್ರಿಶೂಲ ಮತ್ತು ಢಮರುಗಳನ್ನು ಹೊಂದಿದ್ದಾರೆ. ಈ ದೇವಾಲಯವು ಊರಿನ ಮುಂಭಾಗದಲ್ಲಿದೆ. ಅಂತರಾಳದಲ್ಲಿ ನಂದಿ ಶಿಲ್ಪವಿದೆ.

ನವರಂಗದಲ್ಲಿನ ನಾಲ್ಕು ಕಂಬಗಳ ರಚನೆಯು ಪೀಠ, ಕಾಂಡ, ಚೌಕಾಕಾರವಾದ ಭಾಗವನ್ನು ಹೊಂದಿದೆ. ಕಂಬಗಳಲ್ಲಿ ಅಡ್ಡಪಟ್ಟಿಕೆಯ ರಚನೆಯಲ್ಲಿ ಕೆತ್ತನೆಗಳಿವೆ. ಕಂಬಗಳಲ್ಲಿಯ ಉಬ್ಬುಶಿಲ್ಪಗಳಾದ ಆಕಳು, ಈಶ್ವರ, ಗಣೇಶನ ಶಿಲ್ಪಗಳಿವೆ. ನವರಂಗದ ಮೇಲ್ಚಾವಣಿಯಲ್ಲಿ ಭುವನೇಶ್ವರಿಯನ್ನು ಹೊಂದಿದೆ. ಶಾಸನದಿಂದ ಈ ದೇವಾಲಯದ ನಿರ್ಮಾಣದ ಕಾಲವು ೧೮ನೇ ಶತಮಾನವೆಂದು ಗುರುತಿಸಲಾಗಿದೆ.

### ೧೫. ಸಿದ್ದಲಿಂಗೇಶ್ವರ ದೇವಾಲಯ

ಮನ್ಸಲಾಪುರವನ್ನು ಪ್ರವೇಶಿಸುತ್ತಿದ್ದಂತೆಯೇ ಗ್ರಾಮದ ದಕ್ಷಿಣ ಬೆಟ್ಟದ ಮೇಲೆ ಸಿದ್ದಲಿಂಗೇಶ್ವರ ದೇವಾಲಯದ ಮಹಾದ್ವಾರ ಗೋಪುರವನ್ನು ಕಾಣುತ್ತೇವೆ. ರಾಯಚೂರಿನಿಂದ ವಾಯವ್ಯಕ್ಕೆ ಸುಮಾರು ಐದು ಕಿ.ಮೀ. ಅಂತರದಲ್ಲಿರುವ ಚಿಕ್ಕ ಗ್ರಾಮದಲ್ಲಿ ಸಿದ್ಧಲಿಂಗೇಶ್ವರ ದೇವಾಲಯವಿದೆ. ಮೂರು ಶಿಖರವನ್ನು ಹೊಂದಿದೆ. ಸಿದ್ದಲಿಂಗೇಶ್ವರ ದೇವಾಲಯವು ಪೂರ್ವಭಿಮುಖವಾಗಿರುವ ದೇವಾಲಯ. ಈ ದೇವಾಲಯವನ್ನು ಪಾವಟಿಗೆಗಳನ್ನು ಹತ್ತಿ ಬೆಟ್ಟದ ಮೇಲೆ ಹೋದರೆ ಕಾಣಬಹುದಾಗಿದೆ. ದೇವಾಲಯದ ಒಳಗಡೆ ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕಿಗೆ ಮೂರು

ಗರ್ಭಗೃಹಗಳನ್ನು ಕಾಣಬಹುದಾಗಿದೆ. ಪ್ರತಿ ಗರ್ಭಗೃಹದಲ್ಲಿ ಶಿವಲಿಂಗಗಳು ಇವೆ. ಹಾಗೂ ಮುಂಭಾಗದಲ್ಲಿ ನಂದಿಯನ್ನು ಇರಿಸಲಾಗಿದೆ. ಮೂರು ಗರ್ಭಗೃಹಗಳಿಗೆ ಒಂದೇ ನವರಂಗವಿದೆ. ದೇವಾಲಯದ ಮಾಹಾದ್ವಾರವನ್ನು ದಾಟಿ ಮುಂದೆ ಬರುತ್ತಿದ್ದಂತೆಯೇ ಗರ್ಭಗೃಹ, ಮುಖಮಂಟಪ, ಈಶಾನ್ಯ ದಿಕ್ಕಿಗೆ ಇತ್ತೀಚೆಗೆ ಸ್ಥಾಪಿಸಲಾಗಿರುವ ಪಂಚಲಿಂಗಗಳು, ಸಪ್ತಮಾತೃಕೆಯರು, ಪಂಚಲಿಂಗಗಳಿರುವ ದೇವಾಲಯದ ಎಡಭಾಗದಲ್ಲಿಯ ಕಟ್ಟೆಯ ಮೇಲೆ ಎತ್ತರವಾಗಿರುವ ದೀಪಸ್ತಂಭವನ್ನು ಇರಿಸಲಾಗಿದೆ. ದೇವಾಲಯದ ಸುತ್ತಲೂ ಆವರಣವನ್ನು ಹೊಂದಿದೆ. ಮೂರು ಗರ್ಭಗೃಹದ ಮತ್ತು ಅಂತರಾಳದ ಅಲಂಕರಣೆಯು ಒಂದೇಯಾಗಿದೆ. ಹೂಬಳ್ಳಿಗಳು ಲತಾಸುರಳಿಗಳು ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಹೊಂದಿದೆ. ಮೂರು ಶಿಖರಗಳು ಸುಸ್ಥಿತಿಯಲ್ಲಿವೆ.

### ೧೬. ಸೂಗೂರೇಶ್ವರ ದೇವಾಲಯ

ರಾಯಚೂರಿನಿಂದ ದೇವಸೂಗೂರು ಹತ್ತು ಕಿ.ಮೀ. ದೂರದಲ್ಲಿದೆ. ರಾಯಚೂರಿನ ಉತ್ತರ ಭಾಗದಲ್ಲಿ, ಉತ್ತರಾಭಿಮುಖವಾಗಿರುವ ಈ ದೇವಾಲಯವು ಪ್ರಸಿದ್ಧಿಯನ್ನು ಹೊಂದಿದೆ. ವಿಶಾಲವಾದ ಪ್ರಕಾರದಲ್ಲಿದೆ. ಗರ್ಭಗೃಹ, ಅಂತರಾಳ, ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ವೀರಭದ್ರನ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಬಾಗಿಲುವಾಡವು ಪಂಚಶಾಖೆಯಿಂದ ಕೂಡಿದೆ. ಪದ್ಮಶಾಖೆ ವಜ್ರಶಾಖೆ, ಲತಾಸುರಳಿಗಳು, ಚಿಕ್ಕ ಚಿಕ್ಕ ಶಿಲ್ಪಗಳನ್ನು ಹೊಂದಿದೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ ಅಂತರಾಳದ ದ್ವಾರಶಾಖೆಯು ಗರ್ಭಗೃಹದ ದ್ವಾರಶಾಖೆಯಂತೆ ಅಲಂಕಾರವನ್ನು ಹೊಂದಿದೆ. ಅಂತರಾಳದಲ್ಲಿ ನಂದಿಯ ಶಿಲ್ಪವನ್ನು ಹೊಂದಿದೆ. ಶೈವ ದ್ವಾರಪಾಲಕರು ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡದ ಕೆಳಭಾಗದಲ್ಲಿದ್ದಾರೆ. ತ್ರಿಶೂಲ ಮತ್ತು ಢಮರುಗಳನ್ನು ಹೊಂದಿದ್ದಾರೆ. ಅಂತರಾಳದ ಮುಂದಿನ ಕಂಬಗಳಲ್ಲಿ ಸ್ತ್ರೀ ಶಿಲ್ಪಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳು ಉಬ್ಬುಶಿಲ್ಪಗಳಿಂದ ಕೂಡಿದೆ. ಶಿವಲಿಂಗ, ಆಕಳು, ಸೂರ್ಯ, ಚಂದ್ರ ಇತ್ಯಾದಿ ಶಿಲ್ಪಗಳಿವೆ. ಮೇಲ್ಚಾವಣಿಯಲ್ಲಿ ಭುವನೇಶ್ವರಿಯನ್ನು ಹೊಂದಿದೆ. ಅಧಿಷ್ಠಾನ ಭಾಗವು ಕೆತ್ತನೆಗಳಿಂದ ಕೂಡಿದೆ. ಈ ದೇವಾಲಯವನ್ನು

ಪ್ರವೇಶಿಸಲು ಸೋಪಾನಗಳಿವೆ. ಶಿಖರವು ತ್ರಿತಲವಾಗಿದೆ. ಶಿಖರದಲ್ಲಿ ನರಸಿಂಹ, ಈಶ್ವರನು ಪೂಜೆಯನ್ನು ಮಾಡುತ್ತಿರುವುದು ಕಾಣಬಹುದಾಗಿದೆ.

ಈ ದೇವಾಲಯವು ಶಾಸನೋಕ್ತ ದೇವಾಲಯವಾಗಿದೆ. ದೇವಾಲಯಕ್ಕೆ, ಮಠಕ್ಕೆ ಮಹಾಜನಗಳಿ. ದೇವಾಲಯದ ಅರ್ಚಕರಿಗೆ ದೇವರ ಅಂಗಭೋಗ–ರಂಗಭೋಗ ತ್ರಿಕಾಲ ನೈವೇದ್ಯಕ್ಕೆ, ಛತ್ರಕ್ಕೆ ಸಂಬಂಧಿಸಿದ ದಾನ ದತ್ತಿಗಳ ಉಲ್ಲೇಖಗಳನ್ನು ಶಾಸನ ನೀಡುತ್ತದೆ.

**೧೭. ಶಿವ ಗಣೇಶ ನರಸಿಂಹ ದೇವಾಲಯ**

ಮರ್ಚೇಡ ಗ್ರಾಮವು ರಾಯಚೂರಿನಿಂದ ಮೂರು ಕಿ.ಮೀ ದೂರದಲ್ಲಿದೆ. ರಾಯಚೂರಿನ ದಕ್ಷಿಣ ಭಾಗದಲ್ಲಿದೆ. ಊರಿನ ಹೊರಭಾಗದಲ್ಲಿ ಪರ್ವತ ರೆಡ್ಡಿಯ ಹೊಲದಲ್ಲಿ ಈ ದೇವಾಲಯವು ಬಾವಿಯಲ್ಲಿದೆ. ಪಾವಟಿಗೆಗಳನ್ನು ಇಳಿದು ಹೋದರೆ, ಶಿವ, ಗಣೇಶ, ನರಸಿಂಹನ ದೇವಾಲಯಗಳು ಇವೆ. ಪೂರ್ವದಲ್ಲಿನ ದೇವಾಲಯದಲ್ಲಿ ಶಿವಲಿಂಗವಿದೆ. ಇದು ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದೆ. ಬಾಗಿಲುವಾಡವು ಹೂ ಬಳ್ಳಿಗಳ ಅಲಂಕರಣೆಯಿಂದ ಕೂಡಿದೆ. ಪಕ್ಕದಲ್ಲಿಯೇ ಗಣೇಶನ ದೇವಾಲಯವಿದೆ. ಇದು ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದೆ ಈ ದೇವಾಲಯವು ಗ್ರಾನೈಟ್ ಶಿಲೆಯಿಂದ ನಿರ್ಮಾಣ ಮಾಡಲಾಗಿದೆ. ಈ ಮೂರು ದೇವಾಲಯಗಳ ಮೇಲೆ ಶಿಖರಭಾಗವು ಇಲ್ಲ.

**ವೈಷ್ಣವ ದೇವಾಲಯಗಳು**

**೧. ಆಂಜನೇಯ ದೇವಸ್ಥಾನ**

ರಾಯಚೂರಿನ ದಕ್ಷಿಣ ಭಾಗದಲ್ಲಿರುವ ಗಧಾರನಲ್ಲಿರುವ ಆಂಜನೇಯ ದೇವಾಲಯವು ಮುಖ್ಯವಾಗಿದೆ. ಇದು ಚಿಕ್ಕದಾದ ದೇವಾಲಯವಾಗಿದೆ. ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ನಾಲ್ಕು ಅಡಿ ಎತ್ತರವಿರುವ ಹನುಮಂತ (ಆಂಜನೇಯನ) ಶಿಲ್ಪವಿದೆ. ಇದು ದಕ್ಷಿಣಾಭಿಮುಖವಾಗಿರುವ ದೇವಾಲಯವಾಗಿದೆ. ಗರ್ಭಗೃಹವು ಅರ್ಧಗಂಬ, ಪಟ್ಟಿಕೆಗಳು ಮತ್ತು ಲಲಾಸುರುಳಿಗಳಿಂದ ಕೂಡಿದೆ.

ಅರ್ಧಮಂಟಪದ ಕಂಬಗಳು ಸಾದಾ ಇವೆ. ಈ ದೇವಾಲಯವನ್ನು ಗ್ರಾನೈಟ್‌ಶಿಲೆಯಿಂದ ನಿರ್ಮಿಸಲಾಗಿದೆ. ವೈಷ್ಣವ ದ್ವಾರಪಾಲಕ ಶಂಖ ಚಕ್ರವನ್ನು ಹೊಂದಿದ್ದಾರೆ.

**೨. ಆಂಜನೇಯ ದೇವಾಲಯ**

ಹೀರಾಪುರವು ರಾಯಚೂರಿನ ಪಶ್ಚಿಮಭಾಗದಲ್ಲಿದೆ. ಇಲ್ಲಿರುವ ಆಂಜನೇಯ ದೇವಾಲಯವು ಊರಿನ ಮಧ್ಯಭಾಗದಲ್ಲಿದೆ. ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಆಂಜನೇಯನ ಶಿಲ್ಪವು ಇದೆ. ಗರ್ಭಗೃಹದ ಬಾಗಿಲುವಾಡವು ಸಾದಾ ಕೆತ್ತನೆಗಳಿಂದ ಕೂಡಿದೆ. ಅರ್ಧಮಂಟಪದ ಕಂಬಗಳು ಸಾದಾ ಇವೆ. ವೈಷ್ಣವ ದ್ವಾರಪಾಲಕರು ಶಂಖ ಚಕ್ರ ಮತ್ತು ಗದೆಯನ್ನು ಹೊಂದಿದ್ದಾರೆ. ದೇವಾಲಯವು ಶಿಖರ ಭಾಗವನ್ನು ಹೊಂದಿಲ್ಲ.

**೩. ಚೆನ್ನಕೇಶವ ದೇವಾಲಯ**

ಗುಂಬಳಿ ರಾಯಚೂರಿನಿಂದ ಹದಿನೈದು ಕಿ.ಮೀ. ದೂರದಲ್ಲಿದೆ. ರಾಯಚೂರಿನ ದಕ್ಷಿಣ ಭಾಗದಲ್ಲಿದೆ. ಈ ದೇವಾಲಯವು ಊರಿನ ಮಧ್ಯಬಾಗದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದೆ. ಎತ್ತರವಾದ ವೇದಿಕೆಯ ಮೇಲೆ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಶಿಖರವನ್ನು ಹೊಂದಿಲ್ಲ. ಈ ದೇವಾಲಯದ ಹೊರಬದಿಯಲ್ಲಿರುವ ಬಲಗೋಡೆಗೆ ಶಾಸನವೊಂದಿದೆ. ವೈಷ್ಣವ ದ್ವಾರಪಾಲಕರು ಶಂಖ ಚಕ್ರಗಳನ್ನು ಹೊಂದಿದ್ದಾರೆ. ಈ ದೇವಾಲಯವನ್ನು ಪ್ರವೇಶಿಸಲು ನಾಲ್ಕು ಸೋಪಾನಗಳಿವೆ. ಈ ದೇವಾಲಯದ ಶಾಸನವು ಉಲ್ಲೇಖಿಸಿರುವಂತೆ ಗುಂಬಳಿಯ "ದಕ್ಷಿಣಕಾಶಿ" ಎಂದು ಹೆಸರು ಪಡೆದಿತ್ತು. ಮೊದಲು ಈ ದೇವಾಲಯವನ್ನು ಕಟ್ಟಿಗೆಯಿಂದ ನಿರ್ಮಾಣ ಮಾಡಲಾಗಿತ್ತು. ಅನಂತರ ಅದನ್ನು ತೆಗೆದು ಕಲ್ಲಿನ ದೇವಾಲಯವನ್ನು ಕಾಸೆವ್ಯಕಟಯ ಎಂಬ ಶಿಲ್ಪಿಯು ನಿರ್ಮಿಸಿದನೆಂದು ತಿಳಿದುಬರುತ್ತದೆ. ಪ್ರಸ್ತುತ ಕಲ್ಲಿನ ಕಟ್ಟಡವಾಗಿದ್ದು, ಪೂರ್ವದಲ್ಲಿ ನಿರ್ಮಿಸಿದ ಮರಗಳು ಈಗ ಉಳಿದು ಬಂದಿಲ್ಲ.

### ೪. ವೆಂಕಟೇಶ್ವರ ದೇವಾಲಯ

ಕಾಡ್ಲೂರು ರಾಯಚೂರಿನ ಉತ್ತರಭಾಗದಲ್ಲಿದೆ. ರಾಯಚೂರಿನಿಂದ ಸು. ೧೮ ಕಿ.ಮೀ. ದೂರದಲ್ಲಿದೆ. ಊರಿನ ಹಿಂಭಾಗದಲ್ಲಿ ಪೂರ್ವಾಭಿಮುಖವಾಗಿರುವ ವಿಶಾಲವಾದ ದೇವಾಲಯವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ವೆಂಕಟೇಶ್ವರನ ಮೂರ್ತಿಯು ೨ ಅಡಿ ಎತ್ತರವಾಗಿದೆ. ಗರ್ಭಗೃಹದ ಬಾಗಿಲುವಾಡವು ಪಂಚಶಾಖೆಯಿಂದ ಕೂಡಿದೆ. ಪದ್ಮಶಾಖೆ, ಲತಾ ಸುರಳಿ, ಬಳ್ಳಿಗಳಿಂದ ಅಲಂಕೃತವಾಗಿದೆ. ವೈಷ್ಣವ ದ್ವಾರಪಾಲಕರು ಶಂಖ, ಚಕ್ರ, ಗದೆಗಳನ್ನು ಹೊಂದಿದ್ದಾರೆ. ನವರಂಗದಲ್ಲಿನ ಹನ್ನೆರಡು ದುಂಡು ಕಂಬಗಳು ಸಾದಾ ಇವೆ. ಪೀಠ, ಶಾಖೆ ಮೇಲೆ ಗೋಳಾಕಾರದ ಬೋದಿಗೆಗಳನ್ನು ಹೊಂದಿದೆ. ಶಿಖರವನ್ನು ಹೊಂದಿರದ ದೇವಾಲಯವಾಗಿದೆ. ದೇವಾಲಯವನ್ನು ಪ್ರವೇಶಿಸಲು ಐದು ಸೋಪಾನಗಳಿವೆ. ಅಧಿಷ್ಠಾನವು ಸಾದಾ ಇದೆ. ಭಿತ್ತಿಯ ಭಾಗವು ಯಾವುದೇ ಕೆತ್ತನೆಗಳನ್ನು ಹೊಂದಿಲ್ಲ.

### ೫. ವೆಂಕಟೇಶ್ವರ ದೇವಾಲಯ

ರಾಯಚೂರಿನಿಂದ ದಿನ್ನಿ ೮ ಕಿ.ಮೀ. ದೂರದಲ್ಲಿದೆ. ರಾಯಚೂರಿನ ದಕ್ಷಿಣ ಭಾಗದಲ್ಲಿದೆ. ಇದು ಪೂರ್ವಾಭಿಮುಖವಾಗಿದೆ. ಅಗಸಿಯ ಹತ್ತಿರದ ದೇವಾಲಯ. ಈ ದೇವಾಲಯವು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ವೆಂಕಟೇಶ್ವರನಮೂರ್ತಿ ಇದೆ. ಬಾಗಿಲುವಾಡವು ಸಾದಾ ಅಲಂಕರಣೆಯಿಂದ ಕೂಡಿದೆ. ಲಲಾಟಬಿಂಬದಲ್ಲಿ ಹೂವಿನ ಅಲಂಕರಣೆ ಇದೆ. ವೈಷ್ಣವ ದ್ವಾರಪಾಲಕರು ಶಂಖ, ಚಕ್ರ, ಗದೆಗಳನ್ನು ಹಿಡಿದಿದ್ದಾರೆ. ನವರಂಗದಲ್ಲಿ ನಾಲ್ಕು ಕಂಬಗಳು ಇವೆ. ಅವುಗಳು ಸಾದಾ ಇವೆ. ಈ ದೇವಾಲಯವನ್ನು ಪ್ರವೇಶಿಸಲು ಸೋಪಾನಗಳಿವೆ. ಎತ್ತರವಾದ ಕಟ್ಟೆಯ ಮೇಲೆ ಈ ದೇವಾಲಯವನ್ನು ನಿರ್ಮಿಸಲಾಗಿದೆ.

### ೬. ತಿಮ್ಮಪ್ಪ ದೇವಾಲಯ

ರಾಯಚೂರಿನ ದಕ್ಷಿಣ ಭಾಗದಲ್ಲಿರುವ ಎಲೆಬಿಚ್ಚಾಲಿಯಲ್ಲಿರುವ ತಿಮ್ಮಪ್ಪ ದೇವಾಲಯವು ಪ್ರಮುಖವಾಗಿದೆ. ಊರ ಮಧ್ಯ ಭಾಗದಲ್ಲಿದೆ. ಇದು ಪೂರ್ವಾಭಿಮುಖವಾಗಿದೆ. ದೇವಾಲಯದ ತಳವಿನ್ಯಾಸದಲ್ಲಿ ಗರ್ಭಗೃಹ ಮತ್ತು

ಅರ್ಧಮಂಟಪವನ್ನು ಹೊಂದಿದೆ. ಚಿಕ್ಕದಾದ ದೇವಾಲಯವಾಗಿದೆ. ಗರ್ಭಗೃಹದ ಬಾಗಿಲುವಾಡವು ಸಾದಾ ಕೆತ್ತನೆಗಳಿಂದ ಕೂಡಿದೆ. ದ್ವಾರಬಾಗಿಲಲ್ಲಿ ವೈಷ್ಣವ ದ್ವಾರಪಾಲಕರು ಶಂಖ, ಚಕ್ರ ಮತ್ತು ಗದೆಗಳನ್ನು ಹಿಡಿದಿದ್ದಾರೆ. ದೇವಾಲಯದ ಎದುರುಗಡೆ ಗರುಡಗಂಬವಿದೆ.

**೭. ಆಂಜನೇಯ ದೇವಾಲಯ**

ಎಲೆಬಿಚ್ಚಾಲೆಯಲ್ಲಿರುವ ಮತ್ತೊಂದು ದೇವಾಲಯ ಆಂಜನೇಯ ದೇವಾಲಯ. ಈ ದೇವಾಯವು ಗರ್ಭಗೃಹ ಮತ್ತು ಅರ್ಧಮಂಟಪವನ್ನು ಹೊಂದಿದೆ. ದ್ವಾರಶಾಖೆಯು ಸಾದಾ ಇದೆ. ಲಲಾಟದಲ್ಲಿ ಹೂವಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯ ವೈಷ್ಣವ ದ್ವಾರಪಾಲಕರನ್ನು ಹೊಂದಿದೆ. ಶಿಖರವನ್ನು ಹೊಂದಿಲ್ಲ.

**೮. ಬೋಳಮಾನದೊಡ್ಡಿ ವೆಂಕಟೇಶ್ವರ ದೇವಾಲಯ**

ಬೋಳಮಾನದೊಡ್ಡಿ ಗ್ರಾಮವು ರಾಯಚೂರಿನಿಂದ ೬ ಕಿ.ಮೀ. ದೂರದಲ್ಲಿದೆ. ಊರಿನ ಹೊರಭಾಗದಲ್ಲಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಾಲಯದ ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ವೆಂಕಟೇಶ್ವರಮೂರ್ತಿ ಇದೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖೆಯಿಂದ ಕೂಡಿದೆ. ಲಲಾಟದಲ್ಲಿ ನಾಮಶಂಖ ಮತ್ತು ಚಕ್ರಗಳನ್ನು ಹೊಂದಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಬ್ರಹ್ಮ, ವಿಷ್ಣು, ನರಸಿಂಹ, ಕಾಳಿಂಗವರ್ದನ ಇವುಗಳನ್ನು ಕಾಂಡಭಾಗದಲ್ಲಿ ಪಟ್ಟಿಕೆಗಳನ್ನು ಹೊಂದಿದೆ. ಸಾದಾ ಬೋದಿಗೆಗಳು ಇವೆ. ವೈಷ್ಣವ ದ್ವಾರಪಾಲಕರಾದ ಜಯ ವಿಜಯರಿದ್ದಾರೆ. ಇವು ದೊಡ್ಡ ಶಿಲ್ಪಗಳು. ಶಂಖ, ಚಕ್ರ ಮತ್ತು ಗದೆಗಳನ್ನು ಹಿಡಿದಿದ್ದಾರೆ. ವಿಶಾಲವಾದ ಪ್ರಾಕಾರವನ್ನು ಹೊಂದಿದೆ. ಶಿಖರವನ್ನು ಹೊಂದಿದೆ. ಶಿಖರದಲ್ಲಿ ಕೀರ್ತಿ ಮುಖದ ಅಲಂಕರಣೆಯಿದೆ.

**೯. ಭ್ರಮರಾಂಬಾ ದೇವಾಲಯ**

ಈ ದೇವಾಲಯವು ಬೋಳಮಾನದೊಡ್ಡಿಯ ರಸ್ತೆಯಲ್ಲಿದೆ. ಊರಿನ ಹೊರವಲಯದಲ್ಲಿದೆ. ಪೂರ್ವಾಭಿಮುಖವಾಗಿರುವ ದೇವಾಲಯವು ತಳವಿನ್ಯಾಸದಲ್ಲಿ

ಗರ್ಭಗೃಹ ಮತ್ತು ಅಂತರಾಳವನ್ನು ಹೊಂದಿದೆ. ಈ ದೇವಾಲಯದ ಪ್ರಾಕಾರಲ್ಲಿ ಹಲವು ಚಿಕ್ಕ ಚಿಕ್ಕ ದೇವಾಲಯವನ್ನು ಕಾಣಬಹುದು. ಅವುಗಳು ಇಂತಿವೆ.

**೧. ಮಲ್ಲಿಕಾರ್ಜುನ ದೇವಾಲಯ**

ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಾಗಿಲುವಾಡವು ಸಾದಾ ಅಲಂಕರಣೆಯಿಂದ ಕೂಡಿದೆ. ಗರ್ಭಗೃಹ ಬಾಗಿಲು ತುಂಬಾ ಚಿಕ್ಕದಾಗಿದೆ. ಲಲಾಟದಲ್ಲಿ ಹೂವಿನ ಕಂಬಗಳು ಗಾತ್ರದಲ್ಲಿ ದೊಡ್ಡದಿವೆ.

**೨. ರಾಮಲಿಂಗೇಶ್ವರ ದೇವಾಲಯ**

ಗರ್ಭಗೃಹದಲ್ಲಿ ದೊಡ್ಡದಾದ ಶಿವ ಮತ್ತು ಪಾರ್ವತಿ ಲಲಿತಾಸನದಲ್ಲಿ ಕುಳಿತಿರುವ ಶಿಲ್ಪವಿದೆ. ಪಕ್ಕದಲ್ಲಿ ಸ್ತ್ರೀ ಶಿಲ್ಪಗಳು ಮತ್ತು ಸಿಂಹಗಳನ್ನು ಕೆತ್ತಲಾಗಿದೆ.

**೩. ಭ್ರಮರಾಂಬ**

ಗರ್ಭಗೃಹದಲ್ಲಿ ಭ್ರಮರಾಂಬ ದೇವಿಯ ಶಿಲ್ಪವಿದೆ. ಬಾಗಿಲುವಾಡವು ಸಾದಾ ಇದೆ. ದೇವಾಲಯದ ಪಕ್ಕದಲ್ಲಿ ಶಿಲಾಮಂಟಪವನ್ನು ಕಾಣಬಹುದಾಗಿದೆ.

**೪. ಗಣೇಶ**

ಈ ದೇವಾಲಯದ ಮುಂದೆ ಚಿಕ್ಕದಾದ ಹೊಂಡವಿದೆ. ಗರ್ಭಗೃಹದಲ್ಲಿ ಗಣೇಶ ಶಿಲ್ಪವಿದೆ. ಈ ದೇವಾಲಯ ಪ್ರವೇಶ ದ್ವಾರದಲ್ಲಿ ೫ ಸೋಪಾನಗಳಿವೆ. ಶೈವ ದ್ವಾರಪಾಲಕರು ತ್ರಿಶೂಲ ಮತ್ತು ಢಮರುಗಳನ್ನು ಹಿಡಿದಿದ್ದಾರೆ.

**ಆದಿನಾಥೇಶ್ವರ ಬಸದಿ**

ಆದಿನಾಥೇಶ್ವರ ಬಸದಿಯು ರಾಯಚೂರಿನ ಗೀತಾ ಮಂದಿರದ ಬಲ ಬದಿಯ ರಸ್ತೆಯಲ್ಲಿದೆ. ಪೂರ್ವಾಭಿಮುಖವಾಗಿದೆ. ೧೮ನೇಯ ಶತಮಾನದಲ್ಲಿ ನಿರ್ಮಿಸಿದ ಬಸದಿಯಾಗಿದೆ. ಈ ಬಸದಿಯು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ನವರಂಗದ ಕಂಬಗಳು ಚೌಕಾಕಾರವಾಗಿವೆ. ಗರ್ಭಗೃಹದ ಲಲಾಟದಲ್ಲಿ

ಜಿನಬಿಂಬವಿದೆ. ದ್ವಾರಶಾಖೆಯು ಲಲಾಸರಳಿ, ಪದ್ಮಶಾಖೆ ಮತ್ತು ವಜ್ರಶಾಖೆಯಿಂದ ಕೂಡಿದೆ. ಗರ್ಭಗೃಹದಲ್ಲಿ ಆಧಿನಾಥನ ಪ್ರತಿಮೆಯನ್ನು ಇರಿಸಲಾಗಿದೆ. ನವರಂಗದಲ್ಲಿ ೧೬ ಕಂಬಗಳು ಇವೆ. ಅವುಗಳು ಅರ್ಧಕಂಬಗಳಂತೆ ಕಾಣಿಸುತ್ತವೆ. ಅವುಗಳ ಮೇಲೆ ಕಮಾನುಗಳನ್ನು ಮಾಡಲಾಗಿದೆ.

ಈ ಬಸದಿಗೆ ೩೦೦ ವರ್ಷಗಳ ಇತಿಹಾಸವಿದೆ. ಹರಿಹರ ವಂಶದವರು ಈ ಬಸದಿಯನ್ನು ನಿರ್ಮಾಣ ಮಾಡಿದ್ದಾರೆ. ಸಭಾಮಂಟಪ ಮತ್ತು ಮುಖಮಂಟಪವನ್ನು ನಿರ್ಮಿಸಿ ಈ ಬಸದಿಯ ಭವ್ಯತೆಯನ್ನು ಹೆಚ್ಚಿಸಿದ್ದಾರೆ. ಆದಿನಾಥತೀರ್ಥಂಕರ ಮೂರ್ತಿಯು ಕಪ್ಪುಶಿಲೆಯಲ್ಲಿದ್ದು, ಅದು ಈಗ ಭಗ್ನವಾಗಿದೆ. ನಂತರದ ಕಾಲಾವಧಿಯಲ್ಲಿ ಅಮೃತಶಿಲೆಯಲ್ಲಿ ಆಧಿನಾಥತೀರ್ಥಂಕರನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಹರಿಹರ ವಂಶದ ದಾನಪ್ಪ ಮತ್ತು ಬರಮಪ್ಪ ಎಂಬ ಸಹೋದರ ಉಲ್ಲೇಖವು ಶಾಸನದಲ್ಲಿದೆ.

ಹತ್ತು-ಹನ್ನೆರಡನೆಯ ಶತಮಾನವು ಕರ್ನಾಟಕದಲ್ಲಿ ಜೈನಧರ್ಮದ ಪ್ರಾಬಲ್ಯದ ಕಾಲವಾಗಿತ್ತು. ಜೈನಧರ್ಮದ ತತ್ವ ಪ್ರಚಾರ ಮತ್ತು ಪುರಾತನ ಬಸದಿಯ ಅವಶೇಷಗಳು ಇಂದಿಗೂ ನಮಗೆ ಕಾಣಸಿಗುತ್ತವೆ. ಕ್ರಿ.ಶ. ೫ನೇಯ ಶತಮಾನದಲ್ಲಿ ಕುಂದಕುಂಡಾಚಾರ್ಯರು ದಕ್ಷಿಣ ಭಾರತವನ್ನು ಸಂಚರಿಸುತ್ತಾ ರಾಯಚೂರಿಗೆ ಬಂದಿದ್ದರು ಎಂದು ತಿಳಿಯಬಂದಿದೆ. ಅದಕ್ಕಾಗಿ ಆ ಗುಡ್ಡಕ್ಕೆ ಕುಂದಾರಿಬೆಟ್ಟವೆಂದು ಕರೆಯಲಾಗಿದೆ. ರಾಯಚೂರಿನ ಬೋಳಮಾನದೊಡ್ಡಿಯ ಚಿಕ್ಕ ಬೆಟ್ಟದ ಮೇಲೆ ಜನಬಿಂಬಗಳನ್ನು ಕಾಣಬಹುದಾಗಿದೆ. ಜೈನ ಗುರುಗಳ ಪಾದುಕೆಗಳು ಇವೆ. ಹೀಗೆ ಜೈನ ಧರ್ಮದ ಕುರುಹುಗಳನ್ನು ಹೊಂದಿದೆ. ಇದರಿಂದ ನಮಗೆ ರಾಯಚೂರು ಹಿಂದೆ ಜೈನ ಧರ್ಮದ ಕೇಂದ್ರವಾಗಿತ್ತು ಎಂಬುದು ತಿಳಿದುಬರುತ್ತದೆ.

ಬಸದಿಯ ಗೋಪುರದ ಮೇಲೆ ಮತ್ತು ಮಂಟಪದ ಒಳಗೆ ತೀರ್ಥಂಕರ ಪಾದುಕೆಗಳು ಇವೆ. ವೃಷಾಭನಾಥನಿಂದ ಹಿಡಿದು ವರ್ಧಮಾನ ಮಹಾವೀರನವರೆಗೆ ೨೪ ತೀರ್ಥಂಕರದ ಪಾದುಕೆಗಳು ಇವೆ. ಅಮೃತಶಿಲೆಯಲ್ಲಿರುವ ಜೈನಾಲಯದ ಅಂತರಾಳದ ಬಲಗೋಡೆಗೆ ಶಾಸನವಿದೆ. ಪದ್ಮಾಸನ ಭಂಗಿಯಲ್ಲಿರುವ ಆದಿನಾಥ ತೀರ್ಥಂಕರು ಸಿಂಹಪೀಠದಲ್ಲಿ ಕುಳಿತಿದ್ದಾರೆ. ಗೋಮುಖ ಮತ್ತು ಚಕ್ರೇಶ್ವರಿ, ಯಕ್ಷ, ಯಕ್ಷಿಯರು ಇದ್ದಾರೆ.

ಬಸದಿಯ ಅಧಿಷ್ಠಾನ ಸಾದಾ ಇದೆ. ಆವರಣದಲ್ಲಿ ಚಿಕ್ಕ ಗರ್ಭಗೃಹವುಳ್ಳ ಪಾರ್ಶ್ವನಾಥನ ವಿಗ್ರಹವಿದೆ. ಇದು ಕಾಯೋತ್ಸರ್ಗ ಭಂಗಿಯಲ್ಲಿದೆ.

***

## ಮೂರ್ತಿಶಿಲ್ಪಗಳು

ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ದವಾದ ಅರವತ್ತನಾಲ್ಕು ಕಲೆಗಳಿಗೆಲ್ಲಾ 'ಶಿಲ್ಪ' ಎನ್ನುವ ಹೆಸರೇ ಅನ್ವಯವಾಗುತ್ತಿತ್ತು, ಮುಂದೆ ಈ ಪದದ ವ್ಯಾಪ್ತಿ ಪರಿಮಿತಿಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು. ಜಗತ್ ಸೃಷ್ಟಿಯನ್ನು ಜಗತ್ ಶಿಲ್ಪ ಎಂದೂ, ಈ ಜಗತ್ತಿನ ಸೃಷ್ಟಿಕರ್ತನನ್ನು ಜಗತ್‌ಶಿಲ್ಪಿ ಎಂದು ವರ್ಣಿಸಿರುವುದುಂಟು. ಶಿಲ್ಪ ಎಂಬ ಪದವು 'ಶೀಲಸಮುದೌ' ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಸಮಾಧಿ ಎಂಬ ಅರ್ಥವುಳ್ಳ 'ಶಿಲ್ಪ' ಎಂಬ ಧಾತುವು ತಪಸ್ಸನ್ನು ಸೂಚಿಸುತ್ತದೆ.[೧]

"ಶೀಲ ಸಮುಧೌ ಶೀಲ್ಯತ ಇತಿ ಶಿಲ್ಪ" ಮನಸ್ಸು ಸಮಾಧಿ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ ಎಂದು ಹೇಳಿರುವುದು ಶಿಲ್ಪಶಬ್ದದ ವ್ಯಾಪಕ ಅರ್ಥವಿಸ್ತಾರವನ್ನು ಈ ಹಂತದಲ್ಲಿ ಕಾಣಬಹುದು.

"ಶಿಲ್ಪಂ ಕರ್ಮಕಲಾಧಿಕಂ" ಎನ್ನುವುದು ಅಮರಸಿಂಹನ ಅಮರಕೋಶದ ವಿವರಣೆಯಾಗಿದೆ. ಕತೃವಿನ ಅಧಿಕ ಕೌಶಲ್ಯವನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು. ಭಾರತೀಯ ವಾಸ್ತು, ಮೂರ್ತಿ, ಚಿತ್ರಕಲೆಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಶಿಲ್ಪಶಾಸ್ತ್ರವೆಂದು ಗುರುತಿಸಲಾಗುತ್ತದೆ. ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದಲ್ಲಿ ಮೂರ್ತಿ ಅಥವಾ ಪ್ರತಿಮಾ ರಚನೆ, ಅವುಗಳ ಲಕ್ಷಣವನ್ನು ವಿವರಿಸಲಾಗುತ್ತದೆ. ಮೂರ್ತಿ ಎಂಬ ಪದವು ಆ ಪದಕ್ಕೆ ಪರ್ಯಾಯವಾಗಿ ಬಳಸಿದ ಪದಗಳಾದ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಮುಂತಾದ ಶಬ್ದಗಳು ಅದೊಂದು ಭೌತಿಕ ವಸ್ತು ಎಂಬಂತೆ ಅರ್ಥಕೊಡುತ್ತದೆ. ಈ ರೀತಿಯ ಮೂರ್ತಿಶಿಲ್ಪವನ್ನು ಕುರಿತು ಶಾಸ್ತ್ರೀಯ ಅಧ್ಯಯನ ಮಾಡುವುದಕ್ಕೆ ಮೂರ್ತಿಶಾಸ್ತ್ರ ಅಥವಾ ಪ್ರತಿಮಾಶಾಸ್ತ್ರವೆಂದು ಕರೆಯಲಾಗುತ್ತದೆ. ಮೂರ್ತಿಶಿಲ್ಪವನ್ನುದ್ದೇಶಿಸಿ ಶಾಸ್ತ್ರೀಯವಾಗಿ ಹೇಳುವ ಶಿಲ್ಪಶಾಸ್ತ್ರ ಗ್ರಂಥಗಳನ್ನು ಕಾಣಬಹುದು. ಅವುಗಳಲ್ಲಿ ಕಾಶ್ಯಪಶಿಲ್ಪ, ಮಾನಸಾರ, ಸಮರಾಂಗಣಸೂತ್ರಧಾರ, ಶಿಲ್ಪರತ್ನಂ, ಮಯಮತ, ಮಯವಾಸ್ತುಶಾಸ್ತ್ರ, ವಿಶ್ವಕರ್ಮವಾಸ್ತುಶಾಸ್ತ್ರ, ಸಕಲಾಧಿಕಾರ, ಕಾಶ್ಯಪ ಸಂಹಿತೆ, ದೇವತಾಮೂರ್ತಿ ಲಕ್ಷಣ, ಪ್ರಸಾದ ಮಂಡನೆ, ರಾಜವಲ್ಲಭದಂತಹ ಇಪ್ಪತ್ತು ಗ್ರಂಥಗಳು ಅತೀ ಪ್ರಮುಖವಾಗಿವೆ.[೨]

ಮೂರ್ತಿಶಿಲ್ಪದ ಕಲ್ಪನೆಗಳು ಭಾರತದಲ್ಲಿ ಸಿಂಧೂನಾಗರಿಕತೆಯಿಂದಲೂ ಕಂಡುಬರುತ್ತವೆ. ಪ್ರಾರಂಭದಲ್ಲಿ ರಚನೆಯಾಗಿರುವ ಗೂಳಿ, ಲಿಂಗ, ಪಶುಪತಿ, ಶಿವ, ನೃತ್ಯ ಮಾಡುವ ಸ್ತ್ರೀ ಮುಂತಾದ ಶಿಲ್ಪಗಳು ಇಂದಿಗೂ ಅಧ್ಯಯನಗಳ ಚರ್ಚೆಯಲ್ಲಿ ಸ್ಥಾನವನ್ನು ಪಡೆದಿವೆ. ಇವು ನಂತರದ ಭಾರತೀಯ ಮೂರ್ತಿಶಿಲ್ಪಗಳ ಬೆಳವಣಿಗೆಗೆ ಪ್ರೇರಕವಾದವು. ಇನ್ನೂ ವೇದಗಳ ಯುಗದಲ್ಲಿ ವಿಗ್ರಹಗಳಿಗೆ ಪ್ರಾಧಾನ್ಯವಿರಲಿಲ್ಲವೆಂದೂ, ಪ್ರಕೃತಿ ಶಕ್ತಿಗಳನ್ನು ಉಪಾಸಿಸಲಾಗುತ್ತಿತ್ತೆಂದೂ ಹೇಳುವುದುಂಟು, ಇದರಲ್ಲಿ ನಿಜಾಂಶವಿದ್ದರೂ ವಿಗ್ರಹಳಿಗೂ ಸ್ಥಾನವಿಲ್ಲದೇ ಇರಲಿಲ್ಲ. ಇಂದ್ರ ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಅಲ್ಲಿ ಕಾಣುತ್ತೇವೆ. ಚಾರಿತ್ರಿಕ ಯುಗಕ್ಕೆ ಬಂದರೆ ಅತ್ಯಂತ ಪ್ರಾಚೀನವಾದ ಶಿಲ್ಪ ಕೃತಿಗಳು ಮೌರ್ಯರ ಕಾಲದವು. ಕಲ್ಲಿನ ಸ್ತಂಭಗಳ ಮೇಲಿನ ವೃಷಭ, ಆನೆ, ಕುದುರೆ, ಸಿಂಹ, ಮೊದಲಾದ ಆಕೃತಿಗಳು ಪ್ರಮುಖವಾದವು. ಮೌರ್ಯರ ಶಕ್ತಿ ಇಳಿಮುಖವಾಗುತ್ತಿದಂತೆಯೇ ಶುಂಗರು, ಕುಶಾನರು, ಕಳಿಂಗರು

ಶಿಲ್ಪಕಲೆಗೆ ಆಶ್ರಯವನ್ನು ಕೊಟ್ಟರು. ಗುಪ್ತರ ಕಾಲವಂತೂ ಶಿಲ್ಪ, ಸಾಹಿತ್ಯ, ವಿಜ್ಞಾನ ಎಲ್ಲವುಗಳ ದೃಷ್ಟಿಯಿಂದಲೂ ಸುವರ್ಣಯುಗವೆಂದು ಕರೆಯಲಾಗಿದೆ.[೩]

ಕರ್ನಾಟಕ ಚಾರಿತ್ರಿಕ ಕಾಲದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆಯನ್ನು ಗುರುತಿಸುವಾಗ ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು ಹೊಯ್ಸಳರು ಮತ್ತು ವಿಜಯನಗರದ ಅರಸರು ಮೂರ್ತಿಶಿಲ್ಪದ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹ ನೀಡಿದರು.[೪]

ಪ್ರಸ್ತುತ ಅಧ್ಯಾಯದಲ್ಲಿ ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳಲ್ಲಿ ವಿವಿಧ ಕಾಲಘಟ್ಟಗಳಲ್ಲಿ ನಿರ್ಮಿಸಲಾದ ಮೂರ್ತಿಶಿಲ್ಪಗಳನ್ನು ಅಧ್ಯಯನ ಮಾಡಲಾಗಿದೆ. ಈಗಾಗಲೇ ಅಧ್ಯಯನ ಮಾಡಿದಂತೆ ರಾಯಚೂರು ಪರಿಸರವು ಬಹುಮುಖ್ಯವಾಗಿ ಕಲ್ಯಾಣ ಚಾಳುಕ್ಯರು ಕಾಕತೀಯರು ಮತ್ತು ವಿಜಯನಗರದ ಅರಸರ ಕಾಲದಲ್ಲಿ ವಿಪುಲವಾದ ಪ್ರಮಾಣದಲ್ಲಿ ದೇವಾಲಯಗಳು ನಿರ್ಮಾಣಗೊಂಡವು. ಆಯಾ ರಾಜವಂಶಗಳ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತು ಶೈಲಿಯ ದೇವಾಲಯಗಳಲ್ಲಿ ಅವರದೇ ಆದ ಮೂರ್ತಿಶಿಲ್ಪಗಳು ಬೆಳೆದುಬಂದಿವೆ. ಕಲ್ಯಾಣ ಚಾಳುಕ್ಯ ಶೈಲಿಯ ಬಹುತೇಕ ದೇವಾಲಯಗಳನ್ನು ರಾಯಚೂರು ಪರಿಸರದಲ್ಲಿ ಕಾಣಬಹುದು. ದೇವಾಲಯದಲ್ಲಿ ಕಂಡುಬರುವ ಮೂರ್ತಿಶಿಲ್ಪಗಳು ಮತ್ತು ಶಿವಲಿಂಗಗಳು ವಿಭಿನ್ನವಾದ ರೀತಿಯನ್ನು ಹೋಲುತ್ತವೆ. ಇಡಪನೂರಿನ ರಾಮಲಿಂಗೇಶ್ವರ ದೇವಾಲಯದ ಚನ್ನಕೇಶವ ಶಿಲ್ಪವು ಸ್ಥಾನಿಕ ಭಂಗಿಯಲ್ಲಿದೆ. ಕೈಗಳಲ್ಲಿ ಶಂಖ, ಚಕ್ರಗಳನ್ನು ಹೊಂದಿದ್ದಾನೆ. ಪಾರ್ವತಿ ಶಿಲ್ಪವು ಮತ್ತು ಶಿವಲಿಂಗ ಶಿಲ್ಪಗಳು ಪ್ರಮುಖವಾದವುಗಳಾಗಿವೆ. ರಾಯಚೂರಿನ ರಾಮಲಿಂಗೇಶ್ವರ ದೇವಾಲಯದಲ್ಲಿ ಪಾತಳಿಯಲ್ಲಿರುವ ಶಿವಲಿಂಗ ೩ ಅಡಿ ಎತ್ತರವಿದೆ. ಅಂತರಾಳದಲ್ಲಿ ನಂದಿ ಶಿಲ್ಪವಿದೆ. ನಾಗಲಾಪುರದ ಈಶ್ವರ ದೇವಾಲಯದ ಶಿವಲಿಂಗವು ಸ್ಫಟಿಕ ಲಿಂಗವಾಗಿದೆ. ಇದು ವಿಶಿಷ್ಟವಾದುದಾಗಿದೆ. ಇದಕ್ಕೆ ಎದುರಾಗಿ ನಂದಿ ಶಿಲ್ಪವಿದೆ.

ರಾಯಚೂರಿನ ಆನಂದೇಶ್ವರ ದೇವಾಲಯದಲ್ಲಿರುವ ಶಿವಲಿಂಗವು ಎರಡು ಅಡಿ ಎತ್ತರವಿದೆ. ಗ್ರಾನೈಟ್‌ಶಿಲೆಯಲ್ಲಿ ನಿರ್ಮಿಸಲಾಗಿದೆ. ಇದು ವಿಜಯನಗರ ಕಾಲದ ನಿರ್ಮಿತಿಯಾಗಿದೆ. ಅಂತರಾಳದಲ್ಲಿ ನಂದಿಯ ಶಿಲ್ಪ. ಮತ್ತು ಶಿಖರದಲ್ಲಿರುವ ಗಚ್ಚು ಮತ್ತು ಗಾರೆಯ ಶಿಲ್ಪಗಳು ಬಹು ಸುಂದರ ಕೆತ್ತನೆಗಳನ್ನು ಹೊಂದಿದೆ.

## ಶೈವ ಮೂರ್ತಿಶಿಲ್ಪಗಳು

ಶಿವಸಂಬಂಧಿ ಮೂರ್ತಿಶಿಲ್ಪಗಳಿಗೆ ಶೈವ ಮೂರ್ತಿಶಿಲ್ಪಗಳೆಂದು ಕರೆಯಲಾಗುತ್ತದೆ. ರಾಯಚೂರು ಪರಿಸರದ ಶೈವ ದೇವಾಲಯಗಳಲ್ಲಿ ಶೈವ ಸಂಬಂಧಿ ಮೂರ್ತಿಶಿಲ್ಪಗಳಿವೆ. ಅವುಗಳಲ್ಲಿ ಬಹುಮುಖ್ಯವಾಗಿ ಶಿವಲಿಂಗ, ನಂದಿ, ಗಣೇಶ, ವೀರಭದ್ರನ ಶಿಲ್ಪಗಳಿಗಿವೆ. ಎರಡರಿಂದ ನಾಲ್ಕು ಅಡಿ ಎತ್ತರವಿರುವ ಶಿವಲಿಂಗಗಳಿವೆ. ಗ್ರಾನೈಟ್ ಮತ್ತು ಕಪ್ಪು ಮಿಶ್ರಿತ ಬಳಪದ ಶಿಲೆಗಳಲ್ಲಿ ನಿರ್ಮಿಸಲಾಗಿದೆ. ರಾಯಚೂರು ಪರಿಸರದಲ್ಲಿಯ ದೇವಾಲಯಗಳಲ್ಲಿರುವ ಶಿವಲಿಂಗಗಳು ಕೆಲವು ಸ್ವಯಂಭೂ ಲಿಂಗಗಳಾಗಿವೆ. ಕೆರೆಬೋದುರು ಮತ್ತು ಅಲ್ಕೂರುಗಳಲ್ಲಿ ಇಂತಹ ಲಿಂಗಗಳನ್ನು ಕಾಣಬಹುದು. ಕೆರೆಬೋದುರಿನ ರಾಮಲಿಂಗೇಶ್ವರ ದೇವಾಲಯದಲ್ಲಿ ಅಕ್ಕ-ಪಕ್ಕದಲ್ಲಿಯೇ ಎರಡು ಸ್ವಯಂಭೂ ಲಿಂಗಗಳು ಇರುವುದು ವಿಶಿಷ್ಟವಾಗಿವೆ. ಒಂದು ಗ್ರಾನೈಟ್ ಶಿಲೆಯಲ್ಲಿದೆ. ಇನ್ನೊಂದು ಕಪ್ಪು ಶಿಲೆಯಲ್ಲಿದೆ. ಪ್ರತಿಯೊಂದು ಶಿವನ ದೇವಾಲಯಗಳಲ್ಲಿ ಅವನ ವಾಹನ ನಂದಿ ಇರುವುದು ಸಾಮಾನ್ಯವಾಗಿರುತ್ತದೆ. ಈ ಪರಿಸರದ ನಂದಿ ಶಿಲ್ಪಗಳು ಕಲ್ಯಾಣ ಚಾಳುಕ್ಯ ಮತ್ತು ವಿಜಯನಗರ ಕಾಲದ ಶೈಲಿಗಳನ್ನು ಹೋಲುತ್ತವೆ.

ಗಣೇಶನ ಮೂರ್ತಿಶಿಲ್ಪಗಳು ಇಲ್ಲಿನ ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಅವುಗಳಲ್ಲಿ ಇಡಪನೂರಿನ ರಾಮಲಿಂಗೇಶ್ವರ ದೇವಾಲಯದ ನವರಂಗದ ದೇವಕೋಷ್ಟಕಗಳಲ್ಲಿರುವ ಗಣೇಶ ಎಲೆಬಿಚ್ಚಾಲಿಯ ರಾಮಲಿಂಗೇಶ್ವರ ದೇವಾಲಯದ ಅಂತರಾಳದ ಎಡಭಾಗದಲ್ಲಿ ಗಣೇಶನ ಶಿಲ್ಪವು ಸುಂದರವಾಗಿದೆ. ಈ ಗಣೇಶ ಶಿಲ್ಪಗಳು ಲಲಿತಾಸನದಲ್ಲಿ ಕುಳಿತಿದ್ದು ತನ್ನ ಕೈಗಳಲ್ಲಿ ಪಾಶ, ಅಂಕುಶ, ದಂತಗಳನ್ನು ಹೊಂದಿದ್ದಾನೆ. ಇಂತಹ ಹಲವು ಅಂಶಗಳನ್ನು ಗಣೇಶ ಶಿಲ್ಪಗಳಲ್ಲಿ ಕಾಣಬಹುದಾಗಿದೆ.

ವೀರಭದ್ರನ ಮೂರ್ತಿಶಿಲ್ಪಗಳು ಈ ಪರಿಸರದ ಶೈವ ದೇವಾಲಯಗಳಲ್ಲಿ ಕಾಣಬಹುದು. ದೇವಸೂಗೂರಿನ ಸೂಗೂರೇಶ್ವರ ದೇವಾಲಯದಲ್ಲಿರುವ ವೀರಭದ್ರನ ಮೂರ್ತಿಶಿಲ್ಪವು ನಾಲ್ಕು ಅಡಿ ಎತ್ತರವಾಗಿದೆ. ಕೈಗಳಲ್ಲಿ ಶೂಲ, ಬಿಲ್ಲು ಟಂಕ ಇವುಗಳನ್ನು ಹೊಂದಿದ್ದಾನೆ. ಹೀಗೆ ಹಲವು ಶೈವ ಮೂರ್ತಿಗಳಲ್ಲಿ ವೈವಿಧ್ಯತೆಯ ಕಾಣಬಹುದು.

## ವೈಷ್ಣವ ಮೂರ್ತಿಶಿಲ್ಪಗಳು

ರಾಯಚೂರು ಪರಿಸರವು ವೈಷ್ಣವ ಪಂಥಗಳಿಗೆ ಆಶ್ರಯವನ್ನು ನೀಡಲಾಗಿತ್ತು. ಈ ಪಂಥದ ದೇವಾಲಯಗಳು, ಮೂರ್ತಿಶಿಲ್ಪಗಳು ಇತರೆ ಶಿಲ್ಪಾವಶೇಷಗಳು ಮತ್ತು ಶಾಸನಗಳೇ ಪ್ರಮುಖ ಆಧಾರಗಳಾಗಿವೆ. ರಾಯಚೂರು ಪರಿಸರದ ವೈಷ್ಣವ ಮೂರ್ತಿಶಿಲ್ಪಗಳೆಂದರೆ ಅಲ್ಕೂರಿನಲ್ಲಿರುವ ಮಲ್ಲಿಕಾರ್ಜುನ ದೇವಾಲಯದಲ್ಲಿ ಶಿವಲಿಂಗದ ಹಿಂಭಾಗದಲ್ಲಿ ವಿಷ್ಣುವಿನ ಶಿಲ್ಪವಿದೆ. ಈ ಶಿಲ್ಪವು ಸ್ಥಾನಿಕ ಭಂಗಿಯಲ್ಲಿದ್ದು ವಿಷ್ಣುವು ತನ್ನ ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮಗಳನ್ನು ಹೊಂದಿರುವನು. ಕಿರೀಟ, ಕೇಯೂರ, ಕಂಠಹಾರ, ಭುಜಬಂಧ, ಉದರಬಂಧ, ಯಜ್ಞೋಪವೀತ ಮುಂತಾದವುಗಳನ್ನು ಧರಿಸಿದ್ದಾನೆ. ಈ ಶಿಲ್ಪವು ಎರಡು ಅಡಿ ಎತ್ತರವಿದೆ. ಈ ದೇವಾಲಯದ ವಿಶಿಷ್ಟವೆಂದರೆ ಒಂದೇ ಗರ್ಭಗೃಹದಲ್ಲಿ ವಿಷ್ಣು ಮತ್ತು ಶಿವಲಿಂಗಗಳ ಶಿಲ್ಪಗಳಿರುವುದು ವಿಶೇಷವಾಗಿದೆ. ಗುಂಜಳ್ಳಿಯ ಚನ್ನಕೇಶವನ ಶಿಲ್ಪವು ಕಪ್ಪು ಶಿಲೆಯಲ್ಲಿದೆ. ಶಿಲ್ಪವು ಸುಂದರವಾಗಿದೆ. ಕೈಗಳಲ್ಲಿ ಶಂಖ, ಚಕ್ರ, ಗಧ, ಪದ್ಮಗಳನ್ನು ಹೊಂದಿದ್ದಾನೆ. ಮರ್ಚೇಡ್‌ನಲ್ಲಿರುವ ನರಸಿಂಹನ ಶಿಲ್ಪವು ವಿಶಿಷ್ಟವಾಗಿದೆ. ಶಾಂತನರಸಿಂಹನ ಮೂರ್ತಿ ಇದೆ. ಅವನ ತೊಡೆಯ ಮೇಲೆ ಲಕ್ಷ್ಮಿಯನ್ನು ಕುಳ್ಳಿರಿಸಲಾಗಿದೆ. ಬೋಳಮಾನದೊಡ್ಡಿಯಲ್ಲಿರುವ ದೇವಾಲಯದಲ್ಲಿ ಎರಡು ಬಿಂಬಗಳು ವಿಶಿಷ್ಟವಾಗಿವೆ. ಮೊದಲನೆಯದಾಗಿ ಆದಿಶೇಷ ಪೀಠದ ಮೇಲೆ ಲಕ್ಷ್ಮಿ ಸಮೇತನಾದ ನಾರಾಯಣ ಮಂಡಿಸಿದ್ದು ಶಿರದ ಮೇಲೆ ಸರ್ಪದ ಏಳು ಹೆಡೆಗಳು ಬಿಚ್ಚಿಕೊಂಡಂತೆ ತೋರಲಾಗಿದೆ.

ಅದೇ ಪೀಠದ ಬಲಭಾಗದಲ್ಲಿ ಈಶ್ವರ ಲಿಂಗವಿದ್ದು ನಾರಾಯಣನು ತನ್ನ ಕೈಯಿಂದ ಪೂಜೆ ಮಾಡುತ್ತಲಿರುತ್ತಾನೆ. ಲಿಂಗದ ಎದುರು ಆಂಜನೇಯ ಮಂಡಿಯೂರಿ ಭಕ್ತಿಯಿಂದ ಕುಳಿತಿದ್ದಾನೆ. ಇದು ರಾಮಾವತಾರವನ್ನು ಸೂಚಿಸುತ್ತದೆ. ಸೀತೆಯೊಂದಿಗೆ ರಾಮನು ಈಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ ಪೂಜಿಸಿದ ಶ್ರೀರಾಮವತಾರದ ಒಂದು ಸನ್ನಿವೇಶವಾಗಿದೆ.

ಮೊದಲನೆಯದಾಗಿ ಪೀಠದ ಎಡಭಾಗದ ಕೆಳಗಡೆ ಪಾದದ ಶಿಲ್ಪವೆನಿಸುತ್ತದೆ. ಈ ವಿಗ್ರಹವು ನಾಲ್ಕು ಅಡಿ ಎತ್ತರವಿದೆ. ಮೂರು ಅಡಿ ಅಗಲವಿದೆ. ಮುಖದ ಭಾವವು ಸುಂದರವಾಗಿದೆ. ಶಿಲ್ಪಿಯು ಜಾಣತನದಿಂದ ಮೂರು ಅವತಾರಗಳನ್ನು ಬಿಡಿಸಿ

ಭಿನ್ನತೆಯಲ್ಲಿ ಏಕತ್ವವನ್ನು ತೋರಿಸಿದ್ದಾನೆ. ಶಿಲೆಯ ಮುಂಭಾಗದಲ್ಲಿ ಮಾತ್ರ ಕೆತ್ತನೆಯಿದೆ. ಕೊಳಲನ್ನು ಹಿಡಿದಿರುವ ಗೋಪಾಲಕೃಷ್ಣನನ್ನು ಕಡೆದಿರುವುದು ಮತ್ತು ಭಿನ್ನ ಭಿನ್ನವಾದ ಅರ್ಥಪೂರ್ಣವಾದ ಸಂಕೇತವಿರುವ ಇಂತಹ ಮೂರ್ತಿಶಿಲ್ಪಗಳು ಕರ್ನಾಟಕದಲ್ಲಿ ಅಪರೂಪವೆನ್ನಬಹುದು. ಶಿಲ್ಪಿಯು ವೈಷ್ಣವ ಸಂಪ್ರದಾಯದವನಾಗಿದ್ದು, ತನ್ನ ಸಮನ್ವಯ ಧರ್ಮದೃಷ್ಟಿಯಿಂದ ಈ ಶಿಲ್ಪದಲ್ಲಿ ಪ್ರತಿಪಾದಿಸಿದ್ದಾನೆ. ಗಧಾರ ಮತ್ತು ಎಲೆಬಿಚ್ಚಾಲೆಯ ಆಂಜನೇಯ ಶಿಲ್ಪಗಳು ಕೂಡಾ ಮನಮೋಹಕವಾಗಿವೆ. ಗ್ರಾನೈಟ್ ಶಿಲೆಯಲ್ಲಿವೆ.

**ಶಾಕ್ತಮೂರ್ತಿ ಶಿಲ್ಪಗಳು**

ಶಕ್ತಿ ದೇವತೆಗಳ ಮೂರ್ತಿಶಿಲ್ಪಗಳನ್ನು ಶಾಕ್ತಮೂರ್ತಿಶಿಲ್ಪಗಳೆಂದು ಕರೆಯಲಾಗುವುದು. ರಾಯಚೂರಿನ ಭ್ರಮರಾಂಭ ದೇವಾಲಯದಲ್ಲಿ ಪ್ರಮುಖವಾದ ಭ್ರಮರಾಂಭ ದೇವಿಯ ಮೂರ್ತಿಶಿಲ್ಪವಿದೆ. ಕೈಗಳಲ್ಲಿ ವಿವಿಧ ಆಯುಧಗಳು ಇವೆ. ಕೊರಳಲ್ಲಿ ಕಂಠಹಾರ, ಭುಜಬಂಧ, ಕೈಬಳೆಯನ್ನು ಧರಿಸುವುದು ಕಂಡುಬರುತ್ತದೆ.

ಬೋಳಮಾನದೊಡ್ಡಿಯ ದೇವಾಲಯದಲ್ಲಿರುವ ಮಹಿಷಮರ್ದಿನಿಯ ಇನ್ನೊಂದು ವಿಗ್ರಹವಿದೆ. ಮಹಿಷಾಸುರನನ್ನು ಕಾಲಿನಿಂದ ತುಳಿಯುತ್ತಾ ತನ್ನ ಎಡಗೈಯಲ್ಲಿರುವ ತ್ರಿಶೂಲದಿಂದ ತಿವಿಯುತ್ತಿರುವ ಈ ಮೂರ್ತಿಯನ್ನು ಸುತ್ತುವರಿದು ಪ್ರಭಾವಳಿಯ ಎಡಭಾಗದಲ್ಲಿ ಗೋಪಾಲಕೃಷ್ಣನನ್ನು ಬಿಡಿಸಲಾಗಿದೆ. ರಾಕ್ಷಸನನ್ನು ಸಂಹರಿಸಿ ದೇವಿಯ ಕ್ರೋಧಭಾವವನ್ನು ಶಾಂತಗೊಳಿಸಲು ಶಿಲ್ಪಿಯು ಈ ಕೊಳಲು ಗೋಪಾಲಕೃಷ್ಣನನ್ನು ಕರೆದಿರಬಹುದೆಂಬ ಸಂದೇಹ ಮೂಡುತ್ತದೆ. ಇದು ಸಹ ಮೂರು ಅಡಿ ಎತ್ತರಿವಿದ್ದು ಎರಡು ಅಡಿ ಅಗಲವಿದ್ದು ಯಾವುದಕ್ಕೂ ಪಾಣಿಪೀಠಗಳಿರುವುದಿಲ್ಲ.

**ಇತರೇ ಪಂಥದ ಮೂರ್ತಿಶಿಲ್ಪಗಳು**

ಇಡಪನೂರಿನ ರಾಮಲಿಂಗೇಶ್ವರ ದೇವಾಲಯದ ಹೊರಭಾಗದಲ್ಲಿರುವ ಸರಸ್ವತಿಯ ಮೂರ್ತಿಶಿಲ್ಪವು ಭಗ್ನವಾಗಿದೆ. ಈ ಶಿಲ್ಪವು ಲಲಿತಾಸನ ಭಂಗಿಯಲ್ಲಿದೆ. ಕೊರಳಲ್ಲಿ ಮಣಿಸರಗಳು ಹಾರ, ಪದಕ, ಕೈಯಲ್ಲಿ ಪುಸ್ತಕ ಇನ್ನೊಂದು ಕೈಯಲ್ಲಿ ವೀಣೆಯನ್ನು ಹಿಡಿದಿದ್ದಾಳೆ. ಸುಲ್ತಾನಪುರದ ಬಸವೇಶ್ವರ ದೇವಸ್ಥಾನದಲ್ಲಿ ಅಂತರಾಳದಲ್ಲಿರುವ ಕಂಬಗಳ ಮೇಲೆ ತುಂಬಾ ಅಲಂರಣೆಯಿಂದ ಕೂಡಿದ

ಮರಕತೋರಣವಿದೆ. ಕಂಬದ ಕೆಳಭಾಗದಲ್ಲಿ ಸ್ತ್ರೀಶಿಲ್ಪಗಳಿವೆ. ಸ್ತ್ರೀಶಿಲ್ಪಗಳು ತ್ರಿಭಂಗಿಯಲ್ಲಿವೆ. ಆಭರಣಗಳಾದ ಹಾರ, ಪದಕ, ಮಣಿಸರ, ಕಂಠಹಾರ, ತೋಳುಬಂದಿ, ಕೈಗಡಗ, ಕಾಲುಗಡಗ ಇವುಗಳನ್ನು ಹೊಂದಿದೆ. ಈ ಶಿಲ್ಪಗಳು ಧರಿಸಿರುವ ವಸ್ತ್ರವಿನ್ಯಾಸವು ಸುಂದರವಾಗಿದೆ. ಅಲ್ಕೂರಿನ ಮಲ್ಲಿಕಾರ್ಜುನ ದೇವಾಲಯದ ಹೊರಭಾಗದಲ್ಲಿ ಜಿನಶಿಲ್ಪವನ್ನು ಇರಿಸಲಾಗಿದೆ. ರಾಯಚೂರಿನ ಆದಿನಾಥೇಶ್ವರ ಜೈನ ಬಸದಿಯಲ್ಲಿ ಪದ್ಮಾಸನ ಭಂಗಿಯಲ್ಲಿರುವ ಆದಿನಾಥೇಶ್ವರರ ಪಕ್ಕಕ್ಕೆ ಯಕ್ಷ ಯಕ್ಷಿಯರು ಗೋಮುಖ, ಚಕ್ರೇಶ್ವರಿಯರು ಇದ್ದಾರೆ. ಈ ಪರಿಸರದಲ್ಲಿ ಹಲವಾರು ವೀರಗಲ್ಲುಗಳು, ಸತಿಕಲ್ಲುಗಳು ಕಂಡುಬರುತ್ತವೆ. ವೀರಗಲ್ಲುಗಲು ಸಾಮಾನ್ಯವಾಗಿ ಖಡ್ಗ, ಗುರಾಣಿ ಇವುಗಳನ್ನು ಹೊಂದಿರುತ್ತವೆ. ಆದರೆ ಇಲ್ಲಿ ಆಧುನಿಕ ಕಾಲದಲ್ಲಿ ಬಳಸುವ ಬಂದೂಕುಗಳನ್ನು ಹಿಡಿದಿದ್ದಾರೆ.

ಒಟ್ಟಿನಲ್ಲಿ ರಾಯಚೂರು ಪರಿಸರದಲ್ಲಿ ಎಲ್ಲಾ ಪಂಥದ ಧರ್ಮದ ಸಮನ್ವಯತೆಯನ್ನು ದೇವಾಲಯ ಮತ್ತು ದೇವಾಲಯದಲ್ಲಿರುವ ಮೂರ್ತಿಶಿಲ್ಪಗಳಿಂದ ತಿಳಿದುಬರುತ್ತದೆ. ತುಂಗಭದ್ರೆ, ಕೃಷ್ಣೆಯ ಮಧ್ಯದ ಆಯಕಟ್ಟಿನ ಪ್ರದೇಶವು ಚಾಳುಕ್ಯ ವಿಕ್ರಮಾದಿತ್ಯನ ಆಡಳಿತಕ್ಕೊಳಪಟ್ಟ ಪ್ರದೇಶವಾಗಿದ್ದು ಹಲವು ಧರ್ಮಗಳ ಸಂಸ್ಕೃತಿಗಳೊಂದಿಗೆ, ಕಾಳಾಮುಖ ಸಂಪ್ರದಾಯವು ಸಹ ಈ ಭಾಗದಲ್ಲಿರಬಹುದಾದ ಕುರುಹುಗಳು ದೊರೆಯುತ್ತವೆ.

ಇವುಗಳನ್ನು ಕಂಡಾಗ ಕಲ್ಯಾಣ ಚಾಳುಕ್ಯ, ಓರಂಗಲ್ಲಿನ ಕಾಕತೀಯರು, ವಿಜಯನಗರದವರು ಹೀಗೆ ಎಲ್ಲರ ಆಡಳಿತವನ್ನು ಕಂಡ ರಾಯಚೂರು ನಗರದಲ್ಲಿ ಶಿಲ್ಪ ಚಿತ್ರಗಳಿಗೆ ಕೊರತೆಯಿಲ್ಲ. ಇಲ್ಲಿ ವಿವಿಧ ಸಂಪ್ರದಾಯದ ಮೂರ್ತಿಗಳನ್ನು ಕಾಣಬಹುದಾಗಿದೆ.

# ಅಡಿಟಿಪ್ಪಣಿಗಳು

೧. ಜ್ಞಾನಾನಂದ ಜಿ. "ಶಿಲ್ಪಾದರ್ಶ", ಸಂ.೧, ಪು.೧

೨. ಅದೇ, ಪು.೩

೩. ಜ್ಞಾನಾನಂದ ಜಿ. "ಶಿಲ್ಪಾದರ್ಶ", ಸಂ.೨, ಪು.೧

೪. ತಿಪ್ಪೇರುದ್ರಸ್ವಾಮಿ ಹೆಚ್., "ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ", ಪು.೫೨೩

೫. ಪಾ. ಲ. ಜನಾರ್ಧನ ಹಂದೆ, ಬೋಳಮಾನದೊಡ್ಡಿಯ ದೇವಾಲಯದಲ್ಲಿರುವ ಎರಡು ಅರ್ಥಪೂರ್ಣ ಶಿಲ್ಪಗಳು, ಇತಿಹಾಸ ದರ್ಶನ, ಸಂ. ೧೩, ಪು.೫೬

ಅಧ್ಯಾಯ ೬

# ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳು

## ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳು

ಪ್ರಾಚೀನ ಕಾಲದ ಚರಿತ್ರೆಯನ್ನು ಮತ್ತು ಸಂಸ್ಕೃತಿಯನ್ನು ನಾವು ಸರಿಯಾದ ಕ್ರಮದಲ್ಲಿ ತಿಳಿದುಕೊಳ್ಳಲು ಮೊದಲು ಅವಲಂಬಿಸಬೇಕಾಗಿದ್ದು ಶಾಸನಗಳನ್ನು ಎಂದು ಹೇಳಬಹುದು. "ಇತಿಹಾಸದ ಪ್ರಮಾಣಭೂತವಾದ ಆಧಾರಗಳೆಂದರೆ ಶಾಸನಗಳು ಕನ್ನಡ ಸಾಹಿತ್ಯ, ಕಲಾಕೃತಿಗಳು, ನಾಣ್ಯಗಳು ಪರದೇಶದ ಯಾತ್ರಿಕರ ವರದಿಗಳು, ಭೂಮಿಯ ಅಗೆತದಿಂದ ಹೊರಬಿದ್ದ ಅಂಶಗಳು ಇವೆಲ್ಲವೂ ಸಹಾಯಕವಾದರೂ, ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಪರಂಪರೆಯನ್ನು ತಿಳಿಯುವಂತಹದು ಮುಖ್ಯವಾಗಿ ಶಾಸನಗಳಿಂದಲೇ ಇತರ. ಆಧಾರಗಳು ತುಂಬಿಕೊಡಲಾರದ ಕೆಲವು ಅಂಶಗಳನ್ನು ಇಲ್ಲಿನ ಶಾಸನ ಸಂಪತ್ತು ಒದಗಿಸಿಕೊಟ್ಟಿವೆ[೧]".ಶಾಸನವೆಂಬ ಪದವನ್ನು 'Inscription' ಎಂಬ ಆಂಗ್ಲ ಪದಕ್ಕೆ ಸಂವಾದಿಯಾಗಿ ವಿದ್ವಾಂಸರು ಬಳಿಸುತ್ತಾರೆ. Inscription ಎಂದರೆ ಬಹುಕಾಲ ನಿಲ್ಲಬಲ್ಲ, ಶಾಶ್ವತವಾಗಿ ಉಳಿಯಬಲ್ಲ ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹ ಎಂದು ಅರ್ಥ ನೀಡುತ್ತಾರೆ. ತಾಳೆಗರಿ ಭೂರ್ಜ್ವಪತ್ರ ಕಾಗದ ಮುಂತಾದವುಗಳ ಮೇಲೆ ಕಂಡುಬರುವ ಬರಹಗಳನ್ನು ಬಿಟ್ಟು, ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು.

"ಭಾರತೀಯ ಬರಹದಲ್ಲಿ ಶಾಸನ ಎಂಬ ಪದಕ್ಕೆ ವಿಶಾಲವಾದ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು[೨] ಹೀಗಾಗಿ ಶಾಸನವೆಂಬ ಆಜ್ಞೆ ಪ್ರಜೆಗಳೆಲ್ಲರೂ ಪಾಲಿಸಬೇಕಾದ ಒಂದು ಸಂಹಿತೆ ಸಂವಿಧಾನ, ನೀತಿ ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತಾರೆಂಬ ಎಚ್ಚರಿಕೆಯ ನೀತಿಸಂಹಿತೆಗಳು ಎಂದು ಅರ್ಥ ಪಡೆದುಕೊಡಿತು. ಶಾಸನಗಳಿಗೆ ಧರ್ಮಲಿಪಿಗಳೆಂದು ಕರೆದುಕೊಂಡಿದ್ದಾನೆ, ಅಂದರೆ Inscribe ಎಂಬುದಲಿಂದ ಹೊರಟ ಕೆತ್ತು, ಕೊರೆ, ಕಂಡರಿಸು ಎಂಬ ಅರ್ಥಕ್ಕಿಂತ ಭಿನ್ನವಾಗಿ ಆಡಳಿತ ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು ಕಟ್ಟಳೆ, ವಿಧಿ, ನಿಗ್ರಹ, ಹಿಡಿತ, ಶಿಲಾಲೇಖ, ತಾಮ್ರಲೇಖ, ದಾಖಲೆ, ಶಿಕ್ಷೆ, ದಂಡನೆ, ಶಾಸ್ತಿ, ಒಪ್ಪಂದ ಕರಾರು, ಎಂಬ ವ್ಯಾಪಕ ಅರ್ಥವನ್ನು ಶಾಸನ ಪಡೆದುಕೊಂಡಿತು[೩]. ಶಾಸನಗಳನ್ನು ಬಂಡೆಗಲ್ಲು ಶಿಲೆ ಹಾಗೂ ಧಾತುಗಳಾದ ತಾಮ್ರ, ಕಬ್ಬಿಣ, ಬೆಳ್ಳಿ ಮುಂತಾದವುಗಳ ಮೇಲೆ ಕೆತ್ತುತ್ತಿದ್ದರು. ಕರ್ನಾಟಕವನ್ನೊಳಗೊಂಡಂತೆ ಭಾರತದ ತುಂಬೆಲ್ಲಾ ಅಸಂಖ್ಯಾತ ಶಾಸನಗಳು ದೊರೆತಿವೆ. ಅದರಲ್ಲೂ ಕರ್ನಾಟಕದಲ್ಲಿ ಸಿಗುವಷ್ಟು ಶಾಸನಗಳು ಭಾರತದ ಬೇರಾವ ಪ್ರಾಂತದಲ್ಲೂ ಸಿಗುವುದಿಲ್ಲವೆಂಬುದು ವಿದ್ವಾಂಸರ ಮತ ಕರ್ನಾಟಕದಲ್ಲಿ ಮೌರ್ಯರ ಕಾಲದಿಂದ ಪಾಳೆಗಾರರ ನಂತರದ ಕಾಲದವರಗೂ ಅಪಾರ ಪ್ರಮಾಣದಲ್ಲಿ ಶಾಸನಗಳು ದೊರೆತಿವೆ. ಹಾಗೂ ಬೆಳಕಿಗೆ ಬರುತ್ತಲಿವೆ. ಅವುಗಳು ಆಯಾ ಕಾಲಘಟ್ಟದ ರಾಜಕೀಯ ಮತ್ತು ಸಾಂಸ್ರೃತಿಕ ಚರಿತ್ರೆಯನ್ನು ನಿರ್ಮಿಸುವಲ್ಲಿ ತುಂಬಾ ಸಾಹಾಯಕಾರಿಯಾಗಿವೆ.[೪] ಇತರೆ ಶಾಸನ ಪ್ರಕಾರಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ದಾನ ಶಾಸನಗಳದೇ ಮೇಲುಗೈ. ದೇವಾಲಯಗಳಿಗೆ, ಮಠ, ಮಾನ್ಯಗಳಿಗೆ ಅಗ್ರಹಾರಗಳಿಗೆ, ಬ್ರಾಹ್ಮಣರು, ಪುರೋಹಿತರು ಮುಂತಾದವರಿಗೆ ದಾನಗಳನ್ನು ನೀಡುತ್ತಿದ್ದ ಅವುಗಳಿಗೆ ಸಾಕ್ಷಿಯಾಗಿವೆ. ಮುಖಂಡರಿಂದ ಬರಹವಿರುವ ಶಾಸನಗಳನ್ನು ಹಾಕಿಸುತ್ತಿದ್ದರು, ಅವುಗಳನ್ನು ದಾನ ಶಾಸನಗಳೆಂದು ಕರೆಯಲಾಗಿವೆ. ಶಿಲಾಶಾಸನಗಳ ಆಶ್ರಯದಾತರು ಧಾರ್ಮಿಕ ಕಾರ್ಯ ಚಟುವಟಿಕೆಗಳಿಂದ ದೇವಾಲಯಗಳನ್ನು ಕಟ್ಟಿಸುವುದು, ಅವುಗಳ ವ್ಯವಸ್ಥೆಗಾಗಿ ದಾನದತ್ತಿಗಳನ್ನು ಬಿಡುವುದು ಮಠಗಳಿಗೆ, ಅಗ್ರಹಾರಗಳಿಗೆ, ವಿದ್ಯಾಭ್ಯಾಸಕ್ಕೆ ಅನ್ನಸತ್ರಾದಿ, ಇತ್ಯಾದಿ ಧಾರ್ಮಿಕ ಕಾರ್ಯಗಳಿಗಾಗಿ ಭೂಮಿ, ಧನ, ಧಾನ್ಯ ರೂಪಗಳಲ್ಲಿ ದಾನವನ್ನು ನೀಡುತ್ತಿದ್ದರು. ಈ ಬಗೆಯ ಕಾರ್ಯ ಚಟುವಟಿಕೆಯಿಂದ ತಮಗೆ ಪುಣ್ಯಸಲ್ಲುತ್ತದೆ.[೫] ಎಂಬ ಭಾವನೆಯನ್ನು ಅವರು ಹೊಂದಿದ್ದರು. ಅಲ್ಲದೆ ಈ ರೀತಿಯ ಕಾರ್ಯದಿಂದ ತಾವು ಗಳಸಿದ ಸಂಪತ್ತು

ಸಾರ್ಥಕತೆಯನ್ನು ಪಡೆಯುತ್ತದೆ ಎಂಬ ಅಭಿಪ್ರಾಯವನ್ನು ಅವರು ತಳೆದಿದ್ದರಬಹುದು. ಇವಕ್ಕಾಗಿ ಅವುಗಳನ್ನು ತಾವು ನೀಡಿದ ದಾನ ದತ್ತಿಗಳ ದಾಖಲೆಗೆ ಶಾಸನಗಳನ್ನು ಹಾಕಿಸುತ್ತಿದ್ದರು ಮತ್ತು ಅದನ್ನು ಶಿಲೆಯಲ್ಲಿ ಕೊರೆಯಿಸಿ ಶಾಶ್ವತಗೊಳಿಸುತ್ತಿದ್ದರು. ಈ ಅಂಶವನ್ನು ನಾವು ಕಾಣಬಹುದಾಗಿದೆ, ದಾನ ಶಾಸನಗಳು ಒಂದು ಧಾರ್ಮಿಕ ವ್ಯವಸ್ಥೆಯ ಮೇಲೂ ರಾಜ್ಯ ವ್ಯವಸ್ಥೆಯ ಮೇಲೂ ಪ್ರಭಾವ ಬೀರಿದ್ದವು. ಇಂತಹ ದಾನ ಶಾಸನಗಳು ಪ್ರಾರಂಭಿಕ ಮಧ್ಯಕಾಲೀನ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಕಂಡುಬಂದಿದ್ದು ಹೀಗೆ ನೀಡಿದನಿರಂತರ ದಾನಗಳಿಂದಾಗಿ; ದೇವಾಲಯ ವೃತ ಮಾನ್ಯಯ ಅಗ್ರಹಾರ, ವಿದ್ಯಾಕೇಂದ್ರಗಳು ಧರ್ಮ ಮತ್ತು ಛತ್ರಗಳು ಬೆಳೆದುಬಂದಿರುವುದನ್ನು ಕಾಣಬಹುದು.[೬]

ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳಿಗೆ ಸಂಬಂಧಿಸಿದಂತೆ ಕೆಲವು ಶಾಸನಗಳು ಕಂಡುಬರುತ್ತವೆ. ಇವುಗಳು ದಾನ ಶಾಸನಗಳು ಆಗಿವೆ. ಕಲ್ಯಾಣ ಚಾಳುಕ್ಯ ಕಾಲದಿಂದ ವಿಜಯನಗರದ ಅರಸರ ಕಾಲದವರೆಗೆ ಇರುವ ಶಾಸನಗಳನ್ನು ನಾವು ಇಲ್ಲಿ ಗಮನಿಸಿಬಹುದಾಗಿದೆ. ಈ ಎಲ್ಲಾ ಶಾಸನಗಳ ಅಧ್ಯಯನದಿಂದ ಆಯಾ ದೇವಾಲಯಗಳಿಗೆ ಸಂಬಧಿಸಿದ ಹಲವು ಮಾಹಿತಿಗಳನ್ನು ತಿಳಿಯಲು ಈ ಶಾಸನಗಳು ಆಧಾರವಾಗಿವೆ. ರಾಯಚೂರು ಪರಿಸರದಲ್ಲಿರುವ ದೇವಾಲಯಗಳನ್ನು ಅಧ್ಯಯನ ಮಾಡುವಾಗ ಗಮನಿ ಸಬಹುದಾದ ದೇವಾಲಯ ಇಡಪನೂರಿನ ಉತ್ತರೇಶ್ವರ ದೇವಾಲಯವು ಕಲ್ಯಾಣ ಚಾಳುಕ್ಯರ ಕಾಲದಲ್ಲಿ ನಿರ್ಮಾಣವಾಗಿದೆ. ತೃಟಿತವಾಗಿರುವ ಶಾಸನದಲ್ಲಿ ವಿಕ್ರಮವರ್ಷ ೪೭ನೇಯ ಶೋಭಕೃತ, ಪೌಷ್ಯ ಅಮವಾಸ್ಯೆ, ಆದಿವಾರ ದಕ್ಷಿಣಾಯಣ ದಿನದ ಉಲ್ಲೇಖವಿದ್ದು ಇದು ಕ್ರಿ.ಶ ೩೦-೧೨-೧೧೨೨ ಶನಿವಾರಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ಸೌಧರೆ ಮೇಳೆಯನಾಯಕನ ಗುಣಗಾನವಿದೆ. ಈತನು ದೇವತಾಭವನ, ಸಭಾಮಂಟಪ ಕೂಪ, ತಟಾಕ ಕೊಳ ಮುಂತಾದ ಆನೇಕ ಧರ್ಮಕಾರ್ಯಗಳನ್ನು ಮಾಡುವುದರಲ್ಲಿ ಪ್ರವೀಣನೆಂದು ಶಿವಾರಾಧಕನೆಂದು ವರ್ಣಿಸಲಾಗಿದೆ ಇವನನ್ನು ವಿನಯದ ಸೀಮೆ, ಸತ್ಯದ ತವರು ಮುಂತಾಗಿಯೂ ಕರೆಯಲಾಗಿದೆ. ಇವನ ಗುರುಗಳು ಕೆರೆಕಂಠಪಂಡಿತದೇವ. ಈ ಕೆರೆಕಂಠನನ್ನು ಲಾಕುಳ ಸಿದ್ದಾನ್ತರಾದ ವಚಿದು ಕರೆಯಲಾಗಿದೆ. ಇವನ ಶಿವಭಕ್ತಿ ಮಹಿಮೆಯನ್ನು ಬ್ರಹ್ಮಹೇಳಿದ ದಶಕಂಠನು ಇವನ್ನು ವಿಸ್ತರಿಸಿದನೆಂಬ ವಿವರವಿದೆ. ಈ ಮೇಳೆನಾಯಕನು ಮುದಗನೂರು-೩೦೦ ಬಳಿಯ ಇಡಪುಲೂರಿನಲ್ಲಿ ಉತ್ತರೇಶ್ವರ ದೇವಾಲಯವನ್ನು

ಮಾಡಿಸಿದ ವಿವರವಿದೆ ಮಾಹಾಮಂಡಳೇಶ್ವರನಾದ ಪೆರ್ಮಾಡಿದೇವನು ದೇವರ ರಂಗಭೋಗ ಅಂಗಭೋಗ ಖಣ್ಣಸ್ಫುಟಿತ ಜೀರ್ಣೋದ್ಧಾರ, ವಿಧ್ಯಾರ್ಥಿಗಳಿಗೆ, ಚೈತ್ರ, ಪವಿತ್ರ, ಪಾತ್ರಪಾವುಳ. ಧೂಪದೀಪಗಳಿಗಾಗಿ ಊರಿನ ದಕ್ಷಿಣಕ್ಕೆ ಸಿಡಿಲ ಮಾರ್ಕೋಳನ ಕೋಲಿನಲ್ಲಿ ನಿಗರ ಮತ್ತರ ೧೨ನ್ನು ನೀಡುತ್ತಾನೆ. ಊರ ಈಶಾನ್ಯಕ್ಕೆ ಉಲ್ಲಪ ನಾಯಕನಿಗೆ ಎರೆ ೧ ದೇವಾಲಯದ ಪೂರ್ವಕ್ಕೆ ತಾಳೆಯ ತೋಟ[೭] ಹೂತೋಟವನ್ನು ನೀಡಿದ ಉಲ್ಲೇಖಗಳು ಈ ಶಾಸನ ಆಧಾರದಿಂದ ತಿಳಿಯಬಹುದಾಗಿದೆ..

ಕಲ್ಮಾಲದ ಶಾಸನವು ಭೋಗೇಶ್ವರ ದೇವಾಲಯದ ಹೊರಭಾಗದಲ್ಲಿದೆ. ಈ ತುಂಡು ಶಾಸನದಲ್ಲಿ ಕಾಲವು ಕಾಳಾಯುಕ್ತ [ಮಾ] ಘ, ಸು.೩. ಮಂಗಳವಾರ ಎಂದಿದ್ದು ಇದು ಕ್ರಿ.ಶ ೫-೧-೧೧೪೫ರ ಗುರುವಾರಕ್ಕೆ ಸರಿಹೊಂದುತ್ತದೆ. ಈ ದೇವಾಲಯವನ್ನು ಸು. ಕ್ರಿ.ಶ ೧೧೪೫ರಲ್ಲಿ ಕಲ್ಯಾಣ ಚಾಳುಕ್ಯರ ಭೂಲೋಕಮಲ್ಲನ ಕಾಲದಲ್ಲಿ ನಿರ್ಮಿಸಿರಬಹುದು. ಐನೂರ್ವರು ಸ್ವಾಮಿಗಳ ಉಲ್ಲೇಖವಿದ್ದು ದಾನಗಳನ್ನು ನೀಡಿದ ವಿವರವಿದೆ.[೮]

ಇದೇ ದೇವಾಲಯದ ಮುಂದಿರುವ ತುಂಡು ಶಾಸನವಿದೆ. ಕಾಲುಭಾಗವಿರುವ ಶಾಸನವು ಹಾಳಗಿದ್ದು ರಟ್ಟವಂಶದ (ರಾಷ್ಟ್ರಕೂಟ) ನಿತ್ಯವರ್ಷದೇವನ ಆಳ್ವಿಕೆಯಲ್ಲಿ ಒಬ್ಬ ಸಾಮಂತಾಧಿಪತಿಯ ಆಳ್ವಿಕೆಯನ್ನು ಸೂಚಿಸಿತ್ತದೆ. ಸಾಮಂತನ ಹೆಸರು ಮತ್ತಿತರ ವಿವರಗಳು ನಾಶವಾಗಿವೆ.[೯]

ಅದೇ ಗ್ರಾಮದ ಈಶ್ವರ ದೇವಾಲಯದ ಆವರಣದಲ್ಲಿರುವ ಶಾಸನವು ಶಕವರ್ಷ ೮೪೦ನೇಯ ಹೇಮಲಂಬಿ ಸಚಿತ್ಸರದ ಉಲ್ಲೇಖವಿದ್ದು, ಇದು ಕ್ರಿ.ಶ. ೯೪೦ ಕ್ಕೆ ಸರಿ ಹೊಂದುತ್ತದೆ. ಆದರೆ ಹೇಮಲಂಬಿ ಶಕವರ್ಷ ೮೫೯ರಲ್ಲಿ ಬಂದ್ದಿದ್ದು, ಅದನ್ನು ಗ್ರತವೆಂದಿಟ್ಟುಕೊಂಡಲ್ಲಿ ೯೩೭ ಆಗುತ್ತದೆ. ಶಕವರ್ಷ ೮೬೦ರಲ್ಲಿ ವಿಲಂಬಿ ಸಚಿದತ್ಸರವು ಬಂದಿದ್ದು ಶಾಸನ ಬರಹಗಾರ ಅದನ್ನು ಹೇಮಲಂಬಿ ಎಂದು ಬರೇದಿದ್ದಲ್ಲಿ ವಿಲಂಬಿಯನ್ನು ಗ್ರತವರ್ಷವಾಗಿ ಸ್ವೀಕರಿಸಿದಲ್ಲಿ ಮೇಲಿನ ಕಾಲಕ್ಕೆ ಅಚಿದರೆ ಕ್ರಿ.ಶ ೯೪೦ಕೆ ಸರಿಹೊಂದುತ್ತದೆ.

ಶಾಸನದ ಪ್ರಕಾರ ರಾಷ್ಟ್ರಕೂಟ (ರಟ್ಟಕುಲ) ವಂಶದ ಕನ್ನರದೇವನು ಆಳುತ್ತಿದ್ದಾಗ ಆವನ ಸಾಮಂತನಾಗಿ ಬುಟ್ಟರಸನಿದ್ದು ಇವನ್ನು ವೀರಭೂರಿಶ್ರವನ ಹತಭದ್ರಾಂಕಸ, ಸಮರಧನಂಜಯ ಪುಸಿಗೆ ತಲ್ಲಣಿಪ ಮುಂತಾದ ವಿಶೇಷಗಳಿಂದ ಹೋಗಳಲಾಗಿದೆ. ಬುಟ್ಟರಸ ಪಿಟ್ಟಬ್ಬೆ ಮತ್ತು ಕನ್ನರದೇವ ಇವರು ಮೂವರು ಸೇರಿದ್ದಾಗ ಉತ್ತರ ಸಂಕ್ರಾಂತಿಯ ಕಾಲದಲ್ಲಿ ಮಲ್ಲಿಕಾರ್ಜುನ ದೇವರ (ಪೂಜೆಗಾಗಿ) ಬುಟ್ಟರಸ ಕಲ್ಮೇಯ ಆದಿತ್ಯ ಭಟ್ಟಾರನಿಗೆ ಇಳಿ ಮತ್ತರು ಭೂಮಿಯನ್ನು ನೀಡಿದ ಉಲ್ಲೇಖವಿದೆ. ದೇವರಾಸಿಭಟಾರರ ಉಲ್ಲೇಖ ಬಂದಿದೆ.[೧೦]

ಹೊಸಪೇಟೆಯ ಬಸವನಗುಡಿ ಆವರಣದಲ್ಲಿರುವ ತ್ರುಟಿತ ಶಾಸನದಲ್ಲಿ ಕಾಲವು ಶಾಲಿವಾಹನ ಶಕವರ್ಷ ೧೬೭೦, ವಿಭವ ಸಂವತ್ಸರ ಶ್ರಾವಣ ಬ ೨ರ ಉಲ್ಲೇಖವಿದ್ದು, ಇದು ಕ್ರಿ.ಶ ೯-೮-೧೭೪೯ ಭಾನುವಾರಕ್ಕೆ ಸರಿಹೊಂದುತ್ತದೆ. ಹೊಸಪೇಟೆಯ ಮಠಪತಿ ಸ್ಥಾವರಿಕ ಗುಡಿಪುಜಾರಿ ಗಣಾಚಾರಿ, ಪುರಾಣದ ದೇವರು ಮುಂತಾದ ಜಂಗಮರಿಗೆ ಗೌಡ, ಕುಲಕರ್ಣಿ ಸೆಟ್ಟಿ ಮುಂತಾದ ಸಮಸ್ತರು ದಾನವನ್ನು ನೀಡಿದಂತೆ ಶಾಸನವು ತಿಳಿಸುತ್ತದೆ. ಇತರ ವಿವರಗಳು ಹಾಳಗಿವೆ[೧೧]

ಮಂಚಲಾಪುರದ ಗುಡ್ಡದ ಮೇಲಿನ ದೇವಾಲಯದ ಬಾಗಿಲವಾಡದ ಮೇಲೆ ಇರುವ ಶಾಸನವು ತೃಟಿತವಾಗಿದೆ. ವಿವರಗಳು ಸ್ಪಷ್ಟವಿಲ್ಲ. ಕ್ರಿ..ಶ ೧೮ನೆಯ ಶತಮಾನದ ಶಾಸನ,[೧೨]

ದೇವಸೂಗೂರಿನ ಸುಗೂರೇಶ್ವರ ದೇವಾಲಯದ ಮುಖಮಂಟಪದ ಬಲಗೋಡೆಯ ಮುಂಭಾಗದಲ್ಲಿರುವ ತ್ರುಟಿತ ಶಾಸನ ಸುದ್ದಶಿವಾಚಾರ ಸಂಪನ್ನರಾದ ವೀರಶೈವ ಸಿದ್ಧಭಿಕ್ಷ ವೃತ್ತಿಗೆ ಅಯ್ಯನಮಠದ ಕಾರಣಿಕ ಕರ್ತನಾದ ರಾಯಚೂರ ಸೀಮೇಯ ನಾಗಣಾಚಾರಿ ಕರಿಯಪ್ಪ ಸೂಗೂರು ಸ್ಥಾನಿಕ ವೀರಣ್ಣ ವೊಡೆಯ, ಭಾಪ್ರಿವೊಡೆಯು, ಸೂಗೂರು ಸ್ಥಾನಿಕ ವೀರಣವೊಡೆಯ ಕಲ್ಲೂ ಸೋಮ ಉದ್ದಂನ ಮೊದಲಾದವರು ಮಾನ್ಯವನ್ನು ನೀಡಿದಂತೆ ಹೇಳಿದೆ[೧೩]

ಅದೇ ದೇವಾಲಯದ ಇನ್ನೊಂದು ಶಾಸನವು ಕ್ರಿ.ಶ. ಸುಮಾರು ೧೮ನೆಯ ಶತಮಾನಕ್ಕೆ ಸೇರಬಹುದಾದ ಶಾಸನ ಇದರಲ್ಲಿ ಪುಸಕ್ತ ಬ್ರತಿಅಯ್ಯನ ಅಜ್ಞಾಧಾರಕನಾದ

ರಾಚೂರು ನಾಡಸೀಮೆಯ ಬಿಡಲೂರು ಸಿದ್ಧಯಲ್ಲಿನ ವಡೆಯ ಕಂಡದ ಬಸವಸ್ತಾನದ ವಡೆಯನಿಗೆ ಮಾ(ನ) ೨೨ನ್ನು ನೀಡಿದ ಉಲ್ಲೇಖವಿದೆ[೧೪]

ಅದೇ ದೇವಾಲಯದ ಉತ್ತರ ಪ್ರವೇಶ ದ್ವಾರದ ಬಳಿಯ ಕಂಬದಲ್ಲಿರುವ ತ್ರುಟಿತ ಕಾಲದ ಭಾಗ ಹಾಳಾಗಿದೆ. ಪ್ರವುಡ ದೇವರಾಯನು ಆಳುತ್ತಿದ್ದಾಗ ತಿಪರಸಯ್ಯನ ಮಗ ತ್ರಿಯಂಬಕ ಅರಸರು ರಾಯಚೂರು ಸೀಮೆಯಲ್ಲಿ ಏನನ್ನೋ ಕಟ್ಟಿಸಿದಂತೆ ಹೇಳಿದ ವಿವರಗಳು ಹಾಳಗಿವೆ[೧೫].

ಮಟಮಾರಿಯ ವೀರಭದ್ರ ದೇವಾಲಯದ ಭಿತ್ತಿಯಲ್ಲಿರುವ ಶಾಸನವು ತ್ರುಟಿತವಾಗಿದ್ದು ಶಾಸನದಲ್ಲಿ ಆಂಗಿರಸ, ಭದ್ರಪದ, ಶು ೫ರ ಉಲ್ಲೇಖವಿದೆ. ಇವರ ಕಾಲ ಸು ೧೭ನೆಯ ಶತಮಾನ ಹಂಚಿನ ಬೀರಯ ಪಿಕೆದ ಲಿಂಗಯ್ಯನವರು ಮೊರಟಮಾರಿ ಜಂಗಮರ ಕೈಯಿಂದ ತಪ್ಪಿ ಹೋಗಿದ್ದ(?) ಎರಡು ವರಹವನ್ನು ಬಿಡುತ್ತಾರೆ. ಶಾಸನದಲ್ಲಿ ಗಣಾಚಾರಿ ಸಿದ್ದಯನು ದಾನ ನೀಡಿದಂತೆ ಹೇಳಿದೆ[೧೬].

ಅದೇ ದೇವಾಲಯದ ಗೋಡೆಯ ಮೇಲಿನ ಶಾಸನವು ದ್ವಿಭಾಷೆಯಲ್ಲಿದೆ. ಶಾಸನದಲ್ಲಿ ಕಾಲವು ಶಾಲಿವಾಹನ ಶಕ ೧೮೪೩ ದುರ್ಮತಿ, ಶ್ರಾವಣ, ಶು. ೧೧ ಸನ್ ಇಸವಿ ೧೩೩೦ ಅಂದರೆ ಕ್ರಿ.ಶ ೧೯೨೨ರಂದು ಬಸನಗೌಡ ಎಂಬುವವನು ಶಿಲಾಶಾಸನವನ್ನು ಪ್ರತಿಷ್ಠೆ ಮಾಡಿದಂತೆ ಉಲ್ಲೇಖಿಸುತ್ತದೆ.[೧೭]

ಗುಂಜಳಿ ಕೇಶವ ದೇವಾಲಯದ ಎಡಗೋಡೆಯ ಮೇಲಿನ ಶಾಸನವು ಶಾಲಿವಾಹನ ಶಕ ೧೫೯೮, ವ್ಯಯನಾಮ ಫಲ್ಗುಣ, ಬ. ೩ ಶನಿವಾರ ೩೨/೩೯ ಸ್ವತಿ ನಕ್ಷತ್ರ ೨೮/೩೮/ ೧೮/೯/೩೪/ರ/ಠ/೨೧/ದ ೧೦ದ ಉಲ್ಲೇಖವಿದ್ದು ಇದು ಕ್ರಿ. ಶ. ೧೩-೩-೧೬೪೭ ಶನಿವಾರಕ್ಕೆ ಸಮವಾಗುತ್ತದೆ,

ದಕ್ಷಿಣಕಾಶಿ ಎಂದು ಹೆಸರಾಗಿರುವ ಗರಲ ರಾಜ್ಯದ ಕೋಟೆ ರಾಯಚೂರು ಸೀಮೆಗೆ ಸೇರಿದ ಗುಂಜಳಿಯಲ್ಲಿ ಹಜರತಿ ಬಾಚಾ ಸಾಹೇಬನ ಆಳ್ವಿಕೆಯಲ್ಲಿ ಅಲ್ಲಿನ ಪಾರುಪತ್ಯಗಾರ ಮತ್ತು ಗವುಡರಾದ ಸಿರಿರೆಡಿ ಮತ್ತು ಕೆಸಿರೆಡಿ ಕುಲಕರ್ಣಿ ಜನ್ನಪ ಮತ್ತು ಮುರಾರಿ, ಮೇಟಿ ಗೌಡರಾದ ಗುಂಡಿರೆಡಿ, ಕೊಂಡಯ, ಚಂದೂಲಿಂಗಿರೆಡಿ ಗೋವಿಂದ, ನಾಗಿರೆಡಿ, ಮೊದಲಾದ ಜನರೆಲ್ಲಾ ಸೇರಿ ಹೋದಲು ಗ್ರಾಮದ ಆದಿಕೇಶವದೇವರಿಗೆ

ಮೊದಲು ದೇವರಿಗೆ ಮರದ ಗುಡಿ ಇತ್ತು. ಆ ಗುಡಿ ಹಳೆಯದಾದ್ದರಿಂದ ಅದನ್ನು ಕಿತ್ತಿ ಕಲ್ಲುಗುಡಿ ಕಟ್ಟಿಸುತ್ತಾರೆ. ಈ ದೇವಾಲಯವನ್ನು ಕಾಸೆವೆಂಕಟಯ ಮತ್ತು ಬಡಿಗೇರ ಯಲ್ಲೋಜ ಎಂಬಿಬ್ಬರು ಈ ತಂಡದ ಕಷ್ಟವನ್ನು ನೀಡಿ ಒಂದು ವಕ್ಕಳ ಯರೆ ಹೊಲವನ್ನು ನೀಡುತ್ತಾರೆ. ಇಬ್ಬರಿಗೂ ತಲಾ ೮ ಮಾನವನ್ನು ನೀಡಿದ್ದು ಅವುಗಳ ಚಕ್ಕುಬಂದಿಯನ್ನು ಹೇಳಲಾಗಿವೆ.[೧೮]

**ಅಡಿ ಟಿಪ್ಪಣಿಗಳು**

೧. ಪರಮಶಿವಮೂರ್ತಿ ಡಿ. ವಿ., "**ಕನ್ನಡ ಶಾಸನ ಶಿಲ್ಪ**" ಪು.೧-೩

೨. ಅದೇ. ಪು.೩

೩. ಅಣ್ಣಿಗೇರಿ ಎಂ.ಎಂ ಮತ್ತು ಆರ್ ಶೇಷಶಾಸ್ತ್ರಿ, " **ಶಾಸನ ಸಂಗ್ರಹ**" ಪು. ೧

೪. ಅದೇ.ಪು. ೩

೫. ಅದೇ.ಪು ೫-೬

೬. ಚನ್ನಕ್ಕ ಪಾವಟೆ, "**ಶಾಸನ ಸಂಜೀವಿನಿ**, ಪು,೩

೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ:

೮. ಅದೇ, ಸಂ. ರಾ. ೪

೯. ಅದೇ, ಸಂ. ರಾ. ೪೮

೧೦. ಅದೇ, ಸಂ. ರಾ. ೪೯

೧೧. ಅದೇ, ಸಂ. ರಾ. ೫೦

೧೨. ಅದೇ, ಸಂ. ರಾ. ೫೧

೧೩. ಅದೇ, ಸಂ. ರಾ. ೫೫

೧೪. ಅದೇ, ಸಂ. ರಾ. ೫೬

## ಸಮಾರೋಪ

ಕರ್ನಾಟಕವು ಪುರಾತನ ಸಂಸ್ಕೃತಿಯ ನೆಲೆಯಾಗಿದೆ. ಮತ್ತು ಐತಿಹಾಸಿಕ ಮಹತ್ವವವನ್ನು ಪಡೆದ ಪ್ರಾಚೀನ ನಾಡಾಗಿದೆ. ಇಲ್ಲಿರುವ ಅನೇಕ ಪ್ರದೇಶಗಳು ಹಲವಾರು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟು ಸರ್ವಧರ್ಮಗಳ ಸಮನ್ವಯ ಸಾಧಿಸಿದ ಭೂಮಿಯಾಗಿದೆ. ಈ ಹಿನ್ನಲೆಯಲ್ಲಿ ರಾಯಚೂರು ಒಂದಾಗಿದೆ.

ರಾಯಚೂರು ತಾಲೂಕಿನಲ್ಲಿರುವ ಹಲವಾರು ದೇವಾಲಯಗಳ ಇತಿಹಾಸ ಗತವೈಭವವನ್ನು ಸಾರುವ ಸಾಕ್ಷಿಗಳಾಗಿ ಇಂದಿಗೂ ಉಳಿದಿವೆ. ದೇವಾಲಯಗಳು ಒಂದು ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿವೆ. ಬೇರೆ ಬೇರೆ ಧರ್ಮದವರು ದೇವಾಲಯಗಳನ್ನು ಸೂಕ್ತ ಹೆಸರಿನಿಂದ ಕರೆಯುತ್ತಾರೆ. ಜೈನರು ಬಸದಿಗಳೆಂದು, ಕ್ರೈಸ್ತರು ಚರ್ಚುಗಳೆಂದು, ಬೌದ್ಧರು ವಿಹಾರಗಳೆಂದು ಕರೆಯುವರು. ದೇವಾಲಯಗಳು ಕಲಾತ್ಮಕ ಕೃತಿಗಳೂ ಹೌದು, ಕರ್ನಾಟಕವು ಶಿಲ್ಪಕಲೆಗೆ ಹೆಸರುವಾಸಿಯಾಗಿದೆ. ಕಲ್ಲನ್ನು ಕೆತ್ತಿ ನಯವಾದ ರೂಪಕೊಟ್ಟು ಜೀವಕಳೆಯನ್ನು ತುಂಬುವ ಸಾಹಸವನ್ನು ಇಲ್ಲಿನ ಶಿಲ್ಪಿಗಳು ಮಾಡಿದ್ದಾರೆ.

ಗತವೈಭವವನ್ನು ಮತ್ತು ಸಂಸ್ಕೃತಿಯನ್ನು ತಿಳಿಸುವಲ್ಲಿ ದೇವಾಲಯ ಮತ್ತು ಶಾಸನಗಳು ಪ್ರಮುಖವಾದ ಆಕರಗಳಾಗಿವೆ. ಇವುಗಳ ಕಲೆಗೆ ದೊರೆತ ಪ್ರೋತ್ಸಾಹವನ್ನು ಕಲಾ ಶೈಲಿಯನ್ನು ಹಾಗೂ ಧಾರ್ಮಿಕವಾಗಿ, ಸಾಮಾಜಿಕವಾಗಿ ನಡೆಯುವ ಕಾರ್ಯಗಳಿಗೆ ಅಂದಿನ ಅರಸರು, ಸಾಮಂತರು, ದಂಡನಾಯಕರು ಹಾಗೂ ಇನ್ನಿತರ ವ್ಯಕ್ತಿಗಳು ನೀಡಿದ ದಾನವನ್ನು ಮಹತ್ವವನ್ನು ಶಾಸನಗಳ ಮೂಲಕ ತಿಳಿಯಬಹುದಾಗಿದೆ.

ರಾಯಚೂರು ಪರಿಸರದ ಕ್ಷೇತ್ರಕಾರ್ಯಕೈಗೊಂಡು ಪ್ರಾಚೀನ ದೇವಾಲಯಗಳ ವಾಸ್ತು ಶಿಲ್ಪ, ಮೂರ್ತಿಶಿಲ್ಪ, ಶಾಸನಗಳು ಇವೆಲ್ಲವುಗಳನ್ನು ಬಳಸಿಕೊಂಡು ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗಿದೆ. ದೇವಾಲಯಗಳು ಹಾಗೂ ಶಾಸನಗಳಂತೆ, ವೀರಗಲ್ಲುಗಳು, ಮಾಸ್ತಿಗಲ್ಲುಗಳು ಲಭ್ಯವಾಗಿವೆ.

ಇವುಗಳು ವೀರಪರಂಪರೆಯ ದ್ಯೋತಕಗಳಾಗಿವೆ. ರಾಯಚೂರು ಪರಿಸರದ ಪ್ರಾಗಿತಿಹಾಸದ ನೆಲೆಗಳು, ಮಾನವನು ಕೊರೆದ ರೇಖಾಚಿತ್ರಗಳನ್ನು ಬೆಟ್ಟ ಮತ್ತು ಇತರ ಕಡೆಗಳಲ್ಲಿ ಕಾಣಬಹುದಾಗಿದೆ.

ಆಯಾ ಕಾಲದಲ್ಲಿ ಆಳ್ವಿಕೆ ಮಾಡಿದ ಅರಸರು ದಾನ ದತ್ತಿಗಳನ್ನು ಕೊಡುವುದರ ಮೂಲಕ ದೇವಾಲಯಗಳನ್ನು ನಿರ್ಮಿಸುವುದರ ಮೂಲಕ ಈ ಪರಿಸರದ ಸಾಂಸ್ಕೃತಿಕ ವೈಭವವನ್ನು ಹೆಚ್ಚಿಸಿದ್ದಾರೆ. ದೇವಾಲಯ ವಾಸ್ತು ವೈಭವವು ಸಂಸ್ಕೃತಿಯ ವರ್ಧನೆಗೆ ಕಾರಣವಾಗಿವೆ. ದೇವಾಲಯಗಳ ನಿರ್ಮಾಣ ಕಾರ್ಯ ಶತಮಾನಗಳಿಂದ ನಡೆಯುತ್ತಿದ್ದಂತೆ ಇಂದಿಗೂ ಆ ಕಾರ್ಯ ನಿಂತಿಲ್ಲ. ಪುರಾತನ ಪದ್ಧತಿಯಲ್ಲಿ ಆಧುನಿಕ ದೇವಾಲಯಗಳು ನಿರ್ಮಾಣವಾಗುತ್ತಿವೆ. ದೇವಾಲಯವು ಒಂದು ಊರಿನಲ್ಲಿರುವುದು ಶುಭದ ಸಂಕೇತ, ಸತ್ಕಾರ್ಯ ಪ್ರೇರಕ ಧರ್ಮದ ಜಾಗ್ರತಿಗೆ ಸಾದನಗಳಾಗಿವೆ. ರಾಯಚೂರು ಪರಿಸರದಲ್ಲಿ ಹಲವಾರು ಪಂಥದ ದೇವಾಲಯಗಳು ಕಂಡುಬರುತ್ತದೆ. ಧಾರ್ಮಿಕ ಶ್ರದ್ಧೆಯ ಮುಖ್ಯ ಕೇಂದ್ರಗಳಾದ ದೇವಾಲಯ, ಬಸದಿ, ಸ್ತೂಪ, ಚೈತ್ಯ, ಮಸೀದಿ ಹಾಗೂ ಚರ್ಚುಗಳು ಪ್ರಮುಖ ವಾಸ್ತುಶಿಲ್ಪಗಳ ಮಾದರಿಗಳಾಗಿವೆ. ಇವುಗಳನ್ನು ಸಾಮಾನ್ಯವಾಗಿ ಇಟ್ಟಿಗೆ, ಕಟ್ಟಿಗೆ, ಕಲ್ಲು, ಗಾರೆಗಳಿಂದ ನಿರ್ಮಿಸುತ್ತಿದ್ದರು, ದಿನಗಳೆದಂತೆ ಇವುಗಳ ಸಾಮಾಜಿಕ ವ್ಯವಸ್ಥೆಯ ನಿಯಂತ್ರಣದ ಕೇಂದ್ರಗಳಾದವು. ಇವು ಪ್ರಮುಖವಾಗಿ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ವಾತಾವರಣ ನಿರ್ಮಿಸುವ ಕಾರ್ಯಮಾಡಿದವು. ಆದರೂ

ಆಯಾ ಅರಸರ ಆಳ್ವಿಕೆಯಲ್ಲಿ ರಚನೆಯಾದ ದೇವಾಲಯಗಳನ್ನು ಅವುಗಳ ಶೈಲಿಯ ದೃಷ್ಟಿಯಿಂದ ಅದೇ ರಾಜವಂಶಗಳ ಹೆಸರಿನಿಂದ ಸಾಮಾನ್ಯವಾಗಿ ಕರೆದಿದ್ದಾರೆ. ಉದಾ: ಕದಂಬ, ಬಾದಾಮಿ ಚಾಳುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ಹೊಯ್ಸಳ ಹಾಗೂ ವಿಜಯನಗರದ ದೇವಾಲಯಗಳನ್ನು ಆಯಾ ಅರಸು ಮನೆತನಗಳಿಂದ ಗುರುತಿಸಲಾಗಿದೆ. ಒಟ್ಟಿನಲ್ಲಿ ದೇವಾಲಯಗಳು ಸಂಸ್ಕೃತಿಯ ಪ್ರತೀಕಗಳಾಗಿವೆ. ಮಾನವನ ಮನಸ್ಸಿಗೆ ನೆಮ್ಮದಿ ತರುವ ತಾಣಗಳಾಗಿವೆ.

ರಾಯಚೂರು ತಾಲೂಕಿಗೆ ಸಂಬಂಧಿಸಿದಂತೆ ಈವರೆಗೆ ನಡೆದ ಅಧ್ಯಯನಗಳು ಹಲವು ದೃಷ್ಟಿಕೋನಗಳಿಂದ ನಡೆದಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಚನ್ನಬಸಪ್ಪ ಎಸ್. ಪಾಟೀಲರವರ "ಟೆಂಪಲ್ಸ್ ಆಫ್ ರಾಯಚೂರು ಅಂಡ್ ಬಳ್ಳಾರಿ ಡಿಸ್ಟ್ರಿಕ್ಟ್" ಎಂಬ ಪಿಎಚ್.ಡಿ. ಮಹಾಪ್ರಬಂಧವು ರಾಯಚೂರು ಜಿಲ್ಲೆಗೆ ಸಂಬಂಧಿಸಿದ ಕೆಲವು ಗ್ರಾಮಗಳ ದೇವಾಲಯಗಳನ್ನು ಮಾತ್ರ ಗಮನಿಸಿದ್ದಾರೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ರಾಯಚೂರು ತಾಲೂಕಿನ ಗ್ರಾಮವಾರು ಕ್ಷೇತ್ರಕಾರ್ಯ ಮಾಡಿ ದೇವಾಲಯಗಳ ಸಂಪೂರ್ಣ ಮಾಹಿತಿಯನ್ನು ನೀಡಲಾಗಿದೆ. ರಾಯಚೂರಿನ ನೆರೆಯ ತಾಲೂಕು ದೇವದುರ್ಗವಾಗಿದೆ. ಮಹೇಶರವರ "ದೇವದುರ್ಗದ ಶಾಸನಗಳು ಮತ್ತು ಪ್ರಾಚ್ಯಾವಶೇಷಗಳು" ಎಂಬ ಪಿಎಚ್.ಡಿ. ಮಹಾಪ್ರಬಂಧವು ಶಾಸನಗಳು ಮತ್ತು ಪ್ರಾಚ್ಯಾವಶೇಷಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಮಹೇಶರವರ ಮತ್ತೊಂದು ಎಂ.ಫಿಲ್. ಪ್ರಬಂಧವಾದ ಗಬ್ಬೂರಿನ ಗ್ರಾಮಕ್ಕೆ ಸೀಮಿತವಾಗಿದ್ದು ಅದರ ಮಾಹಿತಿಯನ್ನು ನೀಡುತ್ತದೆ. ಚನ್ನಬಸಪ್ಪ ಹಿರೇಮಠರವರ "ಎಡೆದೊರೆನಾಡು" ಎಂಬ ಪುಸ್ತಕ, ಆಡಳಿತ ವಿಭಾಗದ ವಿವರಣೆಯನ್ನು ನೀಡುತ್ತದೆ. ಹಾಗೆಯೇ ರಾಯಚೂರು ತಾಲೂಕಿಗೆ ಸಂಬಂಧಿಸಿದಂತೆ ಹಲವಾರು ಬಿಡಿಲೇಖನಗಳು ಪ್ರಕಟವಾಗಿವೆ.

ರಾಯಚೂರು ನಗರವನ್ನು ಒಳಗೊಂಡಂತೆ ತಾಲೂಕಿನಲ್ಲಿರುವ ಗ್ರಾಮಗಳ ದೇವಾಲಯಗಳನ್ನು ಮತ್ತು ಲಭ್ಯವಾಗಿರುವ ಇತರೇ ಪ್ರಾಚ್ಯಾವಶೇಷಗಳನ್ನು ಕುರಿತು ಅಧ್ಯಯನವನ್ನು ನಡೆಸಲಾಯಿತು. ತಾಲೂಕಿಗೆ ಹೊಂದಿಕೊಂಡಂತೆ ಮಾನ್ವಿ ತಾಲೂಕು ಮತ್ತು ನೆರೆ ರಾಜ್ಯದ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಗಡಿ ಪ್ರದೇಶದ ಕೆಲವು ಗ್ರಾಮಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಪ್ರಾಚೀನ ಕಾಲದ ಆಡಳಿತ

ವಿಭಾಗಗಳಾದ ಎಡೆದೊರೆ ನಾಡು-೨೦೦೦, ಅಯ್ಯಣವಾಡಿ-೩೦೦, ಆಯಿಜ-೩೦೦ಗಳಲ್ಲಿರುವ ದೇವಾಲಯಗಳ ಅಧ್ಯಯನವನ್ನು ಸಮಗ್ರವಾಗಿ ಮಾಡಲಾಗಿದೆ.

ರಾಯಚೂರಿನ ಭೌಗೋಳಿಕ ಪರಿಸರ ಹಿತಮಿತವಾದ ಪ್ರಾಕೃತಿಕ ಸಂಪನ್ಮೂಲಗಳಿಂದ ಕೂಡಿದೆ. ಈ ಪರಿಸರದಲ್ಲಿ ಪ್ರಮುಖವಾಗಿ ಎರೆಮಣ್ಣು (ಕಪ್ಪು ಮಣ್ಣು) ಕೃಷಿಗೆ ಸಹಾಯಕಾರಿಯಾಗಿದೆ. ಎರಡು ನದಿಗಳ ಬಯಲು ಪ್ರದೇಶವು ಫಲವತ್ತತೆಯಿಂದ ಕೂಡಿದೆ. ಪೂರ್ವ ಭಾಗವು ಬೆಟ್ಟಗಳಿಂದ ಆವರಿಸಿದೆ. ಇಲ್ಲಿ ಹೆಚ್ಚಾಗಿ ಗ್ರಾನೈಟ್ ಶಿಲೆಯ ಬೆಟ್ಟಗಳಿಂದ ಕೂಡಿದೆ. ಈ ಭಾಗದಲ್ಲಿ ದೊರೆಯುವ ಶಿಲೆಯ ವಿಧಗಳು ಹೀಗಿವೆ. ಧಾರವಾರ ಸರಣಿಯ ಶಿಲೆಗಳು, ಬೆಣಚುಕಲ್ಲುಗಳು ಕ್ವಾಟ್ಜ್ ಸಿಸ್ಟ್ ಮತ್ತು ಟಾಲ್ಕ್ ಕಲ್ಲುಗಳು ಇವೆ. ಡೈಕ್ ಮತ್ತು ಡೊಲರೈಟ್, ಎಪಿಡೊಲರೈಟ್ಸ್, ಕಲಾದಗಿಯ ಸರಣಿಗಳು, ಮರಳು ಶಿಲೆಗಳಿಂದ ಕೂಡಿದ ಪ್ರದೇಶವಾಗಿದೆ. ಹವಾಗುಣ ಒಣಹವೆಯಿಂದ ಕೂಡಿದೆ. ಇಲ್ಲಿ ಬೆಟ್ಟಗಳು ಇರುವುದರಿಂದ ತಾಪಮಾನವು ಹೆಚ್ಚಾಗಿರುತ್ತದೆ.

ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಮುಖ್ಯ ವಿಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಹಂತ ಅಕ್ಷರ ಜ್ಞಾನವಿಲ್ಲದ ಹಂತ ಅಥವಾ ಪ್ರಾಗಿತಿಹಾಸ ಕಾಲವೆಂದು ಕರೆಯಲಾಗಿದೆ. ಎರಡನೆಯದು ಅಕ್ಷರ ಜ್ಞಾನವಿದ್ದ ಹಂತ ಅಥವಾ ಬರವಣಿಗೆಯ ಕಾಲವೆಂದು ಕರೆಯಲಾಗಿದೆ. ಅಥವಾ ಇತಿಹಾಸ ಕಾಲವೆಂದು ಕರೆಯಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರಾಚೀನ ದೇವಾಲಯಗಳ ದಾಖಲೀಕರಣ ಮಾಡುವುದಾಗಿದೆ. ಈ ಪರಿಸರದಲ್ಲಿ ಎರಡು ಪ್ರಮುಖವಾದ ನದಿಗಳಾದ ತುಂಗಭದ್ರ ಮತ್ತು ಕೃಷ್ಣ ಈ ನದಿಗಳು ಇತಿಹಾಸದ ಪುಟದಲ್ಲಿ ಹೆಸರು ವಾಸಿಯಾಗಿವೆ. ಈ ಎರಡು ನದಿಗಳ ನಡುವಿನ ಪ್ರದೇಶವನ್ನು "ಎಡೆದೊರೆ ನಾಡು" ಎಂದು ಮುಸ್ಲಿಂ ಅರಸರ ಆಳ್ವಿಕೆಯಲ್ಲಿ ದೋ-ಅಬ್ ಪ್ರದೇಶವೆಂದು ಕರೆಯಲಾಗಿದೆ. ಈ ಎರಡು ನದಿ ತೀರದಲ್ಲಿ ಹಲವು ನೆಲೆಗಳನ್ನು ಈಗಾಗಲೇ ಪತ್ತೆ ಹಚ್ಚಲಾಗಿದೆ. ಆ ನೆಲೆಗಳಲ್ಲಿ ವಿವಿಧ ಸಂಸ್ಕೃತಿಯ ಕುರುಹುಗಳು ಕಂಡುಬಂದಿವೆ. ದೇವಸೂಗೂರು ಮಧ್ಯಹಳೆಯ ಶಿಲಾಯುಗದ ನೆಲೆ. ಇಲ್ಲಿ ವಿವಿಧ ಮಾದರಿಯ ಉಪಕರಣಗಳು ದೊರೆತಿವೆ. ಯದ್ಲಾಪುರ ಇದು ಕೂಡಾ ಮಧ್ಯ ಹಳೆ ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆಯಿದು, ರಾಜಲಬಂಡಾದಲ್ಲಿ ಶಿಲಾ ತಾಮ್ರಯುಗ ಸಂಸ್ಕೃತಿಯ ಅವಶೇಷ ಮತ್ತು ಬೂದಿ ದಿಬ್ಬವು ದೊರೆತಿವೆ. ತಲಮಾರಿನಲ್ಲಿ ಬೂದಿ ದಿಬ್ಬವು

ದೊರೆತಿವೆ. ಕಟಕನೂರು, ಕರೇಕಲ್, ಗುರ್ಜಾಪುರ ಇವುಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ಕಲ್ಲುಗುಪ್ಪೆ ಮತ್ತು ಶಿಲಾವೃತ್ತಗಳು ದೊರೆತಿವೆ.

ಚಾರಿತ್ರಿಕ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಈ ಭಾಗದಲ್ಲಿ ಮೌರ್ಯ, ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ದೇವಗಿರಿಯ ಸೇವುಣರು, ಕಾಕತೀಯರು, ವಿಜಯನಗರ ಸಾಮ್ರಾಜ್ಯ ಈ ಎಲ್ಲಾ ರಾಜ ಮನೆತನಗಳ ಆಳ್ವಿಕೆಯನ್ನು ನಡೆಯಿಸಿದ ಪ್ರದೇಶವು ರಾಯಚೂರು ಆಗಿದೆ. ಇಲ್ಲಿರುವ ಎರಡು ಪ್ರಮುಖವಾದ ನದಿಗಳಾದ ಕೃಷ್ಣ ಮತ್ತು ತುಂಗಭದ್ರ ಇವುಗಳ ತೀರದಲ್ಲಿ ಹಲವಾರು ದೇವಾಲಯಗಳನ್ನು ಕಾಣಬಹುದಾಗಿದೆ. ಈ ಪ್ರದೇಶವನ್ನು ದೇವಾಲಯಗಳ ಸಂಕೀರ್ಣವೆಂದು ಕರೆದರೆ ತಪ್ಪಾಗಲಿಕ್ಕಿಲ್ಲ. ಈ ಭಾಗದಲ್ಲಿ ಕಂಡುಬರುವ ದೇವಾಲಯಗಳು ವೈವಿಧ್ಯತೆಯಿಂದ ಕೂಡಿವೆ.

ಏಕಕೂಟ ದೇವಾಲಯಗಳ ಸಂಖ್ಯೆ ಹೆಚ್ಚಾಗಿ ಕಂಡು ಬರುತ್ತವೆ. ಕೆಲವು ಮಾತ್ರ ತ್ರಿಕೂಟ ದೇವಾಲಯಗಳಿವೆ. ಅವುಗಳಲ್ಲಿ ಪ್ರಮುಖವಾದ ದೇವಾಲಯಗಳೆಂದರೆ ಮಂಚಲಾಪುರದ ಸಿದ್ಧಲಿಂಗೇಶ್ವರ ದೇವಾಲಯ ಇದು ತ್ರಿಕೂಟ ದೇವಾಲಯವಾಗಿದೆ. ಮತ್ತೊಂದು ಇಡಪನೂರಿನ ರಾಮಲಿಂಗೇಶ್ವರ ದೇವಾಲಯ ಇದು ತ್ರಿಕೂಟ ದೇವಾಲಯವಾಗಿದೆ. ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳು ವಿರಳ ಆದರೂ ಸಿಕ್ಕಿರುವ ಶಾಸನಗಳಿಂದ ಈ ಭಾಗದ ಆಡಳಿತ, ಧಾರ್ಮಿಕ, ಸಾಮಾಜಿಕ ಹಾಗೂ ಇನ್ನಿತರ ವಿಷಯಗಳನ್ನು ತಿಳಿಯಬಹುದಾಗಿದೆ. ಈ ಪರಿಸರದಲ್ಲಿ ಶೈವ, ವೈಷ್ಣವ ಮತ್ತು ಇತರ ಪಂಥಗಳು ಅಸ್ಥಿತ್ವದಲ್ಲಿದ್ದವು. ಅಲ್ಲಿರುವ ಶಾಸನಗಳಿಂದ ದೇವಾಲಯ ಹಾಗೂ ಮೂರ್ತಿಶಿಲ್ಪಗಳಲ್ಲಿ ಅಭಿವ್ಯಕ್ತಿಯಾಗಿದೆ. ಶಿವನ ಆರಾಧನೆ ಈ ಪ್ರದೇಶದಲ್ಲಿದ್ದುದು ಕಂಡುಬರುತ್ತದೆ. ವೈಧಿಕ ಸಂಸ್ಕೃತಿಯ ಯುಗದಲ್ಲಿ ಸಹ ಶಿವನನ್ನು ರುದ್ರರೂಪದಲ್ಲಿ ಆರಾಧಿಸಲಾಗುತ್ತಿತ್ತು. ಇಲ್ಲಿ ಲಭ್ಯವಾದ ಶಾಸನ, ದೇವಾಲಯ ಹಾಗೂ ಮೂರ್ತಿ ಶಿಲ್ಪಗಳಿಂದ ಅರಿಯಬಹುದಾಗಿದೆ. ಈ ಭಾಗದಲ್ಲಿ ಶೈವ ಧರ್ಮವು ಪ್ರಬಲವಾದ ಧರ್ಮವಾಗಿತ್ತೆಂದು ಇಲ್ಲಿ ದೊರೆತ ಆಕರಗಳು ಪುಷ್ಟೀಕರಿಸುತ್ತವೆ. ಅರಸರ ಹಾಗೂ ಅವರ ಪರಿವಾರದವರು ಹಾಗೂ ಅಧಿಕಾರಿಗಳು ದೇವಾಲಯ ನಿರ್ಮಾಣ, ನಿರ್ವಹಣೆ ಹಾಗೂ ಜೀರ್ಣೋದ್ಧಾರದಂತಹ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು. ದಾನ ದತ್ತಿ ನೀಡಿರುವುದು ಅನೇಕ ಮಾಹಿತಿಗಳು ಇಲ್ಲಿ ದೊರೆತಿರುವ ಶಿಲಾಶಾಸನಗಳಿಂದ ತಿಳಿಯಬಹುದಾಗಿದೆ. ಈ

ಪರಿಸರದಲ್ಲಿ ವೈಷ್ಣವ ಧರ್ಮವು ಪ್ರಭಾವಶಾಲಿಯಾಗಿರದಿದ್ದರೂ, ಕಡಿಮೆ ಪ್ರಮಾಣದ ವೈಷ್ಣವ ಪಂಥದ ದೇವಾಲಯಗಳು ಅಸ್ಥಿತ್ವದಲ್ಲಿದ್ದವು.

ರಾಯಚೂರು ಪರಿಸರದಲ್ಲಿ ಶೈವ ದೇವಾಲಯಗಳ ಸಂಖ್ಯೆ ಹದಿನಾರು ವೈಷ್ಣವ ದೇವಾಲಯಗಳು ಎಂಟು, ಶಾಕ್ತ ದೇವಾಲಯ ಒಂದು ಇತರೇ ಪಂಥದಲ್ಲಿ ಆದಿನಾಥೇಶ್ವರ ಜೈನಬಸದಿ ಇದೆ. ಪ್ರಮುಖವಾಗಿರುವ ಶೈವ ದೇವಾಲಯಗಳಲ್ಲಿ ರಾಯಚೂರಿನ ರಾಮಲಿಂಗೇಶ್ವರ ದೇವಾಲಯ. ಇದು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ಈ ದೇವಾಲಯವು ವಿಶಿಷ್ಟವಾದ ತಳವಿನ್ಯಾಸವನ್ನು ಹೊಂದಿದೆ. ಗರ್ಭಗೃಹವು ಪಾತಳಿಯಲ್ಲಿದೆ. ತಾಲೂಕಿನಲ್ಲಿ ಎರಡು ತ್ರಿಕೂಟ ದೇವಾಲಯಗಳು ಇವೆ. ವಿವಿಧ ರೀತಿಯ ದೇವಾಲಯಗಳನ್ನು ಅವುಗಳಿಗೆ ತತ್ವ ಪಂಥಗಳಾದ ಶೈವ, ವೈಷ್ಣವ ಶಾಕ್ತ ಮತ್ತು ಇತರೇ ಪಂಥದ ಆರಾಧನೆಯು ಇತ್ತೆಂದು ಆಯಾ ದೇವಾಲಯಗಳಿಂದ ತಿಳಿದುಬರುತ್ತದೆ.

ಪ್ರಸ್ತುತ ಪ್ರಬಂಧದ ಸಾರವೆಂದರೆ ಗತವೈಭವದ ಮೇಲೆ ಬೆಳಕು ಚೆಲ್ಲುವುದಾಗಿದೆ. ಅಧ್ಯಯನದ ಇತಿಮಿಗಳನ್ನು ಅನುಸರಿಸಿ ಆಕರಗಳನ್ನು ಸಂಗ್ರಹಿಸಿ ವಿಷಯವನ್ನು ಪ್ರಬಂಧದ ರೂಪ ನೀಡಿ ರಚಿಸಲಾಗಿದೆ. ವಿಶೇಷವಾಗಿ ನೆಲೆಗಳು, ದೇವಾಲಯ, ಮೂರ್ತಿಶಿಲ್ಪ ಹಾಗೂ ಶಾಸನ ಅವಶೇಷಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಹಿಂದೆ ನಡೆದ ಅಧ್ಯಯನಗಳು ಸಮಗ್ರತೆಯನ್ನು ಪಡೆದಿಲ್ಲವೆಂಬ ಹಿನ್ನಲೆಯಲ್ಲಿ ಇಂತಹ ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ನೀಗಿಸಿಕೊಳ್ಳಲು ಈ ಪ್ರಯತ್ನವನ್ನು ಕೈಗೊಳ್ಳಲಾಗಿದೆ. ಕ್ಷೇತ್ರಕಾರ್ಯದ ಮೂಲಕ ವಿಷಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಹಿಂದೆ ನಡೆದ ಅಧ್ಯಯನಗಳಿಂದ ಹೆಚ್ಚಿನ ಮಾಹಿತಿ ದೊರೆಯುವುದರಿಂದ ಪ್ರಸ್ತುತ ಅಧ್ಯಯನದಲ್ಲಿ ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳ ಸಮಗ್ರವಾದ ಚಿತ್ರಣವನ್ನು ನೀಡುವ ಪ್ರಯತ್ನವನ್ನು ಮಾಡಲಾಗಿದೆ.

## ಲೇಖನಗಳು


ಅಪರ್ಣಾ ಕೂ.ಸ., "ದೇವಾಲಯದ ಕಂಬಗಳು: ಒಂದು ಅಧ್ಯಯನ," ಇತಿಹಾಸ ದರ್ಶನ, ಸಂ. ೪, ೧೯೮೯.

ಅಪರ್ಣಾ ಕೂ.ಸ., "ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ದೇವಾಲಯಗಳ ಮಂಟಪಗಳು," ಇತಿಹಾಸ ದರ್ಶನ, ಸಂ. ೭, ೧೯೯೨

ಅಪರ್ಣಾ ಕೂ.ಸ., "ಶಿಲ್ಪಶಾಸ್ತ್ರದ ಗ್ರಂಥಗಳ ಹಿನ್ನೆಲೆಯಲ್ಲಿ ದೇವಾಲಯದ ಭಿತ್ತಿಯ ಬೆಳವಣಿಗೆ. ಒಂದು ಅಧ್ಯಯನ," ಇತಿಹಾಸ ದರ್ಶನ, ಸಂ.೮, ೧೯೯೩

ಅಪರ್ಣಾ ಕೂ.ಸ., "ದೇವಾಲಯದ ಪ್ರಸ್ತರ ರಚನೆಯಲ್ಲಿ ಶಾಸ್ತ್ರಗ್ರಂಥಗಳ ಪಾತ್ರ", ಇತಿಹಾಸ ದರ್ಶನ, ಸಂ. ೯, ೧೯೯೪

ಅಪರ್ಣಾ ಕೂ, ಸ. "ಶಾಸ್ತ್ರ ಗ್ರಂಥಗಳಲ್ಲಿ ನಿರೂಪಿತವಾದ ದೇವಾಲಯದ ಮೆಲಟ್ಟಡದ ರಚನೆ", ಇತಿಹಾಸದರ್ಶನ ಸಂ.೧೧, ೧೯೯೬

ಅಪರ್ಣಾ ಕೂ,ಸ. "ವಾಸ್ತುವಿನ ಭಾಗಗಳನ್ನು ಬೆಸೆಯಲು ಸಂಧಿಕರ್ಮ" ಇತಿಹಾಸ ದರ್ಶನ, ಸಂ ೨೦, ೨೦೦೫

ಅಮರೇಶ ಯತಗಲ್, "ಜಲದುರ್ಗ–ಒಂದು ವಿಶಿಷ್ಟ ಐತಿಹಾಸಿಕ ನೆಲೆ".ಇತಿಹಾಸ ದರ್ಶನ, ಸಂ ೨೦, ೨೦೦೫

ಚಂದ್ರಶೇಖರ., "ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಅರಿಕೇರಿ ಗ್ರಾಮದ ವೀರಗಲ್ಲು," ಇತಿಹಾಸ ದರ್ಶನ, ಸಂ,೧೯ ೨೦೦೪

ಚನ್ನಬಸವ, ಹಿರೇಮಠ, "ಎಡದೊರೆ ಪದದ ನಿಷ್ಪತ್ತಿ," ಇತಿಹಾಸ ದರ್ಶನ, ಸಂ. ೧೫, ೨೦೦೦

ಚನ್ನಬಸವ ಬಿ., "ರಾಯಚೂರು ಜಿಲ್ಲೆಯ ಶಾಸನೋಕ್ತ ಅಗ್ರಹಾರಗಳು" ಇತಿಹಾಸ ದರ್ಶನ, ಸಂ, ೧೯, ೨೦೦೪

ಜನಾರ್ದನ ಪಾ.ಲ. ಹಂದೆ ಬೋಳಮಾನದೊಡ್ಡಿಯ ಎರಡು ಅರ್ಥಪೂರ್ಣ ಶಿಲ್ಪಗಳು ಇತಿಹಾಸ ದರ್ಶನ ಶಂ. ೧೩, ೧೯೯೮

ಪ್ರಭಾಕರ್ ಎಮ್. ಎನ್., " ದಾಕ್ಷಿಣಾತ್ಯ ದೇವಾಲಯಗಳ ಅಧಿಷ್ಠನ ಹಾಗೂ ಇನ್ನಿತರ ರಚನೆಗಳು." ಇತಿಹಾಸ ದರ್ಶನ, ಸಂ. ೧೦. ೧೯೯೫

ಪ್ರಭಾಕರ್ ಎಮ್. ಎನ್., "ಕರ್ನಾಟಕದಲ್ಲಿ ಭೂಮಿಜ ಶೈಲಿಯ ದೇವಾಲಯಗಳು", ಇತಿಹಾಸ ದರ್ಶನ, ಸಂ.೮, ೧೯೯೩

ಪ್ರಭಾಕರ್ ಎಮ್ ಎನ್., " ದೇವಾಲಯಗಳ ಉಗಮ," ಇತಿಹಾಸ ದರ್ಶನ, ಸಂ. ೪, ೧೯೮೯

ಪ್ರಭಾಕರ್ ಎಮ್. ಎನ್., "ದಾಕ್ಷಿಣಾತ್ಯ ದೇವಾಲಯ "ಒಂದು ಅಧ್ಯಯನ," ಇತಿಹಾಸ ದರ್ಶನ, ಸಂ. ೧೦ ೧೯೯೫

ಪ್ರಭಾಕರ್ ಎಮ್. ಎನ್., " ದಾಕ್ಷಿಣಾತ್ಯ ದೇವಾಲಯ–ವಾಸ್ತು ಮತ್ತು ಪಾರಿಭಾಷೆ," ಇತಿಹಾಸ ದರ್ಶನ ಸಂ.೯, ೧೯೯೪

ಪ್ರಭಾಕರ್ ಎಮ್. ಎನ್., "ದೇವಾಲಯಗಳಲ್ಲಿ ಪಾದವರ್ಗ," ಇತಿಹಾಸ ದರ್ಶನ, ಸಂ, ೧೬. ೨೦೦೧

ರಾಜಶ್ರೀ ಕಿಶೋರ, " ದೇವಸೂಗೂರಿನ ಅಪ್ರಕಟಿತ ಶಾಸನಗಳು" ಇತಿಹಾಸ ದರ್ಶನ, ಸಂ. ೧೭, ೨೦೦೨

ವಾಸುದೇವನ್ ಸಿ. ಎಸ್. "ಎಡೆನಾಡು ಒಂದು ಆಡಳಿತಾಂಗ ವಿಭಾಗ ಒಂದು ಆಧ್ಯಯನ." ಇತಿಹಾಸ ದರ್ಶನ ಸಂ.೧೨ ೧೯೯೭

ಸುಜಾತಾ ಮಲ್ಲನಗೌಡ, ಮಲಿಯಾಬಾದ ಕೋಟೆ, ಇತಿಹಾಸ ದರ್ಶನ ಸಂ.೧೨ ೧೯೯೭

ಸುಜಾತಾ ಮಲ್ಲನಗೌಡ, "ರಾಯಚೂರು ಕೋಟೆಯಲ್ಲಿನ ಕೊತ್ತಲುಗಳು," ಇತಿಹಾಸದ ದರ್ಶನ, ಸಂ, ೧೩, ೧೯೯೮

***

## ಗ್ರಂಥಗಳು


ಅಪರ್ಣಾ ಕೂ.ಸ., **ದೇವಾಲಯದ ವಾಸ್ತುಶಿಲ್ಪ ಪರಿಚಯ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯.

ಅಭಿಶಂಕರ ಕೆ, **ಗ್ಯಾಜಿಟಿಯರ ಆಫ್ ಇಂಡಿಯಾ, ಮೈಸೂರು ಸ್ಟೇಟ್ ರಾಯಚೂರು ಡಿಸ್ಟ್ರಿಕ್ಟ್**, ೧೯೭೦

ಆಸೂರಿ ಶೀನಿವಾಸಯ್ಯಂಗಾರ ಮತ್ತು ತಿರುಪತಿ ಶ್ರೀನಿವಾಸಯ್ಯಂಗಾರ್ **ಭರತ ಖಂಡದ ದೇವಾಲಯಗಳು**, ೧೯೯೮

ಎಚ್ಚೆಸ್ಕೆ, **ಅವಲೋಕನ ಪರಂಪರೆ ಸಮೀಕ್ಷೆ:** ವಿಶ್ವ ಕನ್ನಡ ಸಮ್ಮೇಳನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

ಕೆ.ಎಲ್, ಎನ್ ಮೂರ್ತಿ, ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ರಂಜಿತ್ ಪ್ರಕಾಶನ, ಬೆಂಗಳೂರು, ೧೯೯೮

ಕರವೀರ ಪ್ರಭು ಕ್ಯಾಲಕೊಂಡ, **ಚಾಳುಕ್ಯ ವಾಸ್ತುಶಿಲ್ಪ ವೈಭವ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭

ಕಲಬುರ್ಗಿ ಎಂ. ಎಂ,. **ಕರ್ನಾಟಕದ ಕೈಫಿಯತ್ತುಗಳು**, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೩

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ರಾಯಚೂರು ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಕೊಪ್ಪ ಎಸ್ ಕೆ, **ತರ್ದವಾಡಿ ನಾಡು ಒಂದು ಅಧ್ಯಯನ**, ಇಂಡಿ ೧೯೯೦

ಗೋಪಾಲರಾವ್, ಹೆಚ್. ಎಸ್, **ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗ** ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ನಿದೇಶನಾಲಯ, ಮೈಸೂರು, ೧೯೯೩

ಗೋಪಾಲ ಬಾ.ರ, **ಕರ್ನಾಟಕ ಇತಿಹಾಸ** ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೮೦

ಗೋಪಾಲ ಬಾ, ರಾ (ಸಂ.), **ಕರ್ನಾಟಕ ಕಲೆಗಳು**, ವಾಸ್ತು, ಸಂ. ೪, ಕನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೩

ಚನ್ನಬಸವ ಹಿರೇಮಠ, **ಎಡದೊರೆ ನಾಡು,** ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಚಿದಾನಂದಮೂರ್ತಿ ಎಂ. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಮೃಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯

ಚನ್ನಬಸಪ್ಪ ಎಸ್, ಪಾಟೀಲ ಆಫ್ ರಾಯಚೂರು ಆ್ಯಂಡ ಬಳ್ಳಾರಿ ಡಿಸ್ಟ್ರಿಕ್ಟ, ರಾಜ್ಯಪ್ರಾಚ್ಯವಸ್ತು ಮತ್ತು ಸಂಗ್ರಹಲಾಯಗಳ ನಿರ್ದೇಶನಾಲಯ, ಮೈಸೂರು, ೧೯೯೨

ತಿಪ್ಪೇರುದ್ರಸ್ವಾಮಿ, **ಕರ್ನಾಟಕದ ಸಾಂಸ್ರೃತಿಕ** ಸಮೀಕ್ಷೆ, ಮೈಸೂರು, ೧೯೬೮

ದೇವರಕೊಂಡಾರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪

ದೇವರಕೊಂಡಾರೆಡ್ಡಿ, **ಗಂಗರ ಶಿಲ್ಪಕಲೆ,** ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು, ೧೯೯೩

ನಾರಾಯಣ ಕೆ.ವಿ, **ಸ್ಥಳನಾಮಗಳು: ಪರಿವರ್ತನೆ ಮತ್ತು ಪ್ರಭಾವ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯.

ನಾಗಭೂಷಣ ಸ್ವಾಮಿ. ಓ.ಎಲ್., **ಕರ್ನಾಟಕ ಕನ್ನಡಿ.** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೯.

ಪ್ರಭಾಕರ್ ಎಮ್. ಎನ್., **ದೇವಾಲಯ ವಾಸ್ತು ಚಂದ್ರಿಕೆ** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೦

ಪಾಟೀಲ ಸಿ. ಎಸ್., **ಕರ್ನಾಟಕದ ಕೊಟೆಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೦

ಪರಶಿವಮೂರ್ತಿ ಡಿ. ವಿ **ಕನ್ನಡ ಶಾಸನ ಶಿಲ್ಪ.** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯

ಪ್ರಸನ್ನ ಕುಮಾರ ಆಚಾರ್ಯ, **ಎನ್‌ಸೈಕ್ಲೋಪಿಡಿಯಾಆಫ್ ಹಿಂದೂ ಆರ್ಕಿಟೆಕ್ಚರ್,** ಸಂ.I-II,(ಮರುಮುದ್ರಣ), ೧೯೯೪

ಬಸವಲಿಂಗ ಸೊಪ್ಪಿಮಠ, ಗೊಬ್ಬುರು ಬಿಚ್ಚಿಬಾಚರಸರು, ಕಿಸಾನ ಪ್ರೆಸ್, ೧೯೯೭

ಬಸವರಾಜ ಸಬರದ, **ರಾಯಚೂರು ಜಿಲ್ಲೆಯ ಅನುಭಾವಿ ಕವಿಗಳು,** ಕನ್ನಡ ಸಾಹಿತ್ಯಪರಿಷತ, ರಾಯಚೂರು, ೧೯೯೬

ಬಸವರಾಜ ಸಬರದ, ರಾಯಚೂರು ಜಿಲ್ಲೆ ದರ್ಶನ, ಪ್ರಸಾರಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪

ಬಾಲಸುಬ್ರಮಣ್ಯ, ವಾಸುದೇವನ್ ಸಿ.ಎಸ್., ಮತ್ತು ರಮೇಶನಾಯ್ಕ **ಕರ್ನಾಟಕದ ದೇವಾಲಯಗಳ ಕೋಶ: ಗದಗ ಜಿಲ್ಲೆ,** ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭

ಮಹೇಶ, **ಗಬ್ಬೂರಿನ ದೇವಾಲಯಗಳು ಮತ್ತು ಶಾಸನಗಳು,** ಎಂಫಿಲ್ ಪ್ರಬಂಧ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಮಹೇಶ, **ದೇವದುರ್ಗದ ಶಾಸನಗಳು ಮತ್ತು ಪ್ರಾಚ್ಯಾವಶೇಷಗಳು** ಪಿಎಚ್.ಡಿ.ಪ್ರಬಂಧ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ಮಹದೇವ ಸಿ,**ಕರ್ನಾಟಕದ ಪುರಾತತ್ವ ಶೋಧ:** ಶ್ರೀ ಲಕ್ಷ್ಮೀ ಪ್ರಕಾಶನ, ಹೊಸಪೇಟೆ ೨೦೦೧

ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟಗಳು, (ಹಳೆಯದು)

ರಾಮಚಂದ್ರರಾವ್ **ಎಸ, ಕೆ, ಮೂರ್ತಿಶಿಲ್ಪದ ನೆಲೆ ಹಿನ್ನೆಲೆ,** ಬೆಂಗಳೂರು ೧೯೭೫

ರಾಜಶೇಖರ ಎಸ್, **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ,** ಸುಜಾತಾ ಪಬ್ಲಿಕೇಷನ್ಸ, ಧಾರವಾಡ, ೧೯೮೮

ಲಕ್ಷಣ ತೆಲಗಾವಿ, **ಮೌರ್ಯ ಮತ್ತು ಶಾತವಾಹನ ಯುಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪

ವಸು ಎಂ.ವಿ.(ಸಂ), **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧

ಶ್ರೀಕಂಠಶಾಸ್ತ್ರಿ ಎಸ್. ಹೊಯ್ಸಳ ವಾಸ್ತುಶಿಲ್ಪ ಮೈಸೂರು, ೧೯೬೫

ಶೀಲಾಕಾಂತ ಪತ್ತಾರ, **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಶಿವಾನಂದ ವಿ, **ಹೈದ್ರಾಬಾದ ಕರ್ನಾಟಕದ ಕನ್ನಡ ಶಿಲಾಶಾಸನಗಳು**, ಬನಾರಸ, ಹಿಂದೂ ವಿಶ್ವವಿದ್ಯಾಲಯ,

ಶಿವತಾರಕ ಕೆ.ಬಿ,**ಕರ್ನಾಟಕದ ಪುರಾತತ್ವ ನೆಲೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಶ್ರೀನಿವಾಸನ್ ಕೆ.ಆರ್,ಟೆಂಪಲ್ಸ್ ಆಫ್ ಸೌತ್ ಇಂಡಿಯ, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನ್ಯೂಡೆಲ್ಲಿ, ೧೯೭೭.

ಸುಂದರ ಅ. ಸಂ), **ಕರ್ನಾಟಕ ಚರಿತ್ರೆ**, ಸಂ.೧, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭(

ಸುಜಾತಾ ಮಲ್ಲನಗೌಡ, ಕೊಪ್ಪಳ ಮತ್ತು ರಾಯಚೂರು ಕೋಟೆಗಳ ಒಂದು ಅಧ್ಯಯನ, ಪಿ.ಎಚ್.ಡಿ ಮಹಾಪ್ರಬಂಧ (ಅಪ್ರಕಟಿತ), ಕನ್ನಡ ವಿಶವಿದ್ಯಾಲಯ, ಹಂಪಿ, ೨೦೦೦

ಸುಂದರ ಅ, ಗಂಗ–ಕದಂಬ ಪೂರ್ವ ಇತಿಹಾಸ **'ಅವಲೋಕನ'** ಕನ್ನಡ ವಿಶ್ವಸಮ್ಮೇಳನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೭೮

ಸುರೇಶ ಕೆ.ಎಂ, ವಾಸುದೇವ ಬಡಿಗೇರ, ಸೋಮಶೇಖರ ಎಸ್. ವೈ ಮತ್ತು ಮಾಡಲಗೇರಿ ಕೊಟ್ರೇಶ, **ಕರ್ನಾಟಕ ದೇವಾಲಯ ಕೋಶ: ಕೊಪ್ಪಳ** ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧

ಹಿರೇಮಠ ಬಿ.ಆರ್, **ಶಾಸನಗಳಲ್ಲಿ ಕನ್ನಡದ ವರ್ತಕರು**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೯೬

ಜ್ಞಾನಾನಂದ ಜಿ.ಶಿಲ್ಪಾದರ್ಶ, ಸಂಪುಟ–೧, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧

ಜ್ಞಾನಾನಂದ ಜಿ.ಶಿಲ್ಪಾದರ್ಶ, ಸಂಪುಟ–೨, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨

***



ಮಲ್ಲಿಕಾರ್ಜುನ ದೇವಾಲಯ, ಅಲ್ಲೂರು



ಈಶ್ವರ ದೇವಾಲಯ, ಬಾವಿದೊಡ್ಡಿ



ವೆಂಕಟೇಶ್ವರ ದೇವಾಲಯ, ಬೋಳಮದೊಡ್ಡಿ



ಸೂಗೂರೇಶ್ವರ ದೇವಾಲಯ, ದೇವಸೂಗೂರು



ಸೂಗೂರೇಶ್ವರ ದೇವಾಲಯ, ದೇವಸೂಗೂರು



ವೆಂಕಟೇಶ್ವರ ದೇವಾಲಯ, ದಿನ್ನೆ



ಆಂಜನೇಯ ದೇವಾಲಯ, ಹೀರಾಪುರ



ಬಸವೇಶ್ವರ ದೇವಾಲಯ, ಹೊಸಪೇಟೆ



ರಾಮಲಿಂಗೇಶ್ವರ ದೇವಾಲಯ, ಇಡಪನೂರು



ಈಶ್ವರ ದೇವಾಲಯ, ಜಾಗರಕಲ್




ಆದಿನಾಥೇಶ್ವರ ಜೈನ ಬಸದಿ, ರಾಯಚೂರು



ಬೀರಲಿಂಗೇಶ್ವರ ದೇವಾಲಯ, ಜಾಲಿಬೆಂಚಿ



ವೆಂಕಟೇಶ್ವರ ದೇವಾಲಯ, ಕಾಡಲೂರು



ಭೋಗೇಶ್ವರ ದೇವಾಲಯ, ಕಲ್ಮಲಾ



ರಾಮಲಿಂಗೇಶ್ವರ ದೇವಾಲಯ, ಕೆರೆಬೋದೂರು



ಸಿದ್ಧಲಿಂಗೇಶ್ವರ ದೇವಾಲಯ, ಮಂಚಲಾಪುರ



ರಾಮಲಿಂಗೇಶ್ವರ ದೇವಾಲಯ, ರಾಯಚೂರು




ಬಸವೇಶ್ವರ ದೇವಾಲಯ, ಸುಲ್ತಾನಪುರ




ಹನುಮಲಿಂಗೇಶ್ವರ ದೇವಾಲಯ, ಉಡಮಗಲ್ ಖಾನಾಪುರ






ಬಸವಣ್ಣ ದೇವಾಲಯ, ಯರಗೇರಾ

ಈಶ್ವರ ದೇವಾಲಯ, ಉಪ್ಪರಾಳ್



ವೀರಭದ್ರೇಶ್ವರ ದೇವಾಲಯ, ಎಲೆಬಿಚ್ಚಳ್ಳಿ



ವೀರಗಲ್ಲು, ಗಾರಲದಿನ್ನೆ



ಸ್ತ್ರೀಶಿಲ್ಪ, ಜಾಲಿಬೆಂಚಿ



ಲಕ್ಷ್ಮಿ ನರಸಿಂಹ ಶಿಲ್ಪ, ಮರ್ಚೆಡ್



ಸೂರ್ಯ ಶಿಲ್ಪ, ಎಲೆಬಿಚ್ಚಾಲೆ



ದ್ವಾರಪಾಲಕರ ಉಬ್ಬುಶಿಲ್ಪ, ಸೂಗೂರೇಶ್ವರ ದೇವಾಲಯ



ಗಣೇಶ ವಿಗ್ರಹ, ದಿನ್ನೆ



ಆದಿನಾಥೇಶ್ವರ ಜೈನಶಿಲ್ಪ, ರಾಯಚೂರು



ಕಂಬದಲ್ಲಿರುವ ಸ್ತ್ರೀಶಿಲ್ಪ, ಸುಲ್ತಾನಪುರ



ವೀರಗಲ್ಲು ಶಿಲ್ಪ, ಅಲ್ಲೂರು



೧. ಈಶ್ವರ ದೇವಾಲಯ, ಜಗರಕಲ್





೨. ವೆಂಕಟೇಶ್ವರ ದೇವಾಲಯ, ಕಾಡ್ಲೂರು



೩. ಈಶ್ವರ ದೇವಾಲಯ, ನಾಗಲಾಪುರ



೪. ಈಶ್ವರ ದೇವಾಲಯ, ಉಪ್ಪರಾಳ



೫. ಆನಂದೇಶ್ವರ ದೇವಾಲಯ, ರಾಯಚೂರು



೬. ಮಲ್ಲಿಕಾರ್ಜುನ ದೇವಾಲಯ, ಅಲ್ಲೂರು



೭. ರಾಮಲಿಂಗೇಶ್ವರ ದೇವಾಲಯ, ಇಡಪನೂರು



೮. ಈಶ್ವರ ದೇವಾಲಯ, ಗಧಾರ



೯. ಸಿದ್ಧಲಿಂಗೇಶ್ವರ ದೇವಾಲಯ, ಮಂಚಲಾಪುರ



೧೦. ಬಸವೇಶ್ವರ ದೇವಾಲಯ, ಯರಗೇರಾ ಕೆರೆ



೧೧. ಬಸವೇಶ್ವರ ದೇವಾಲಯ, ಸುಲ್ತಾನಪುರ



೧೨. ರಾಮಲಿಂಗೇಶ್ವರ ದೇವಾಲಯ, ಕೆರೆಬೋದುರು



೧೩. ಸೂಗುರೇಶ್ವರ ದೇವಾಲಯ, ದೇವಸೂಗೂರು



೧೪. ವೀರಭದ್ರೇಶ್ವರ ದೇವಾಲಯ, ಮಟಮಾರಿ



೧೫. ಆದಿನಾಥೇಶ್ವರ ಜೈನ ಬಸದಿ, ರಾಯಚೂರು



೧೬. ರಾಮಲಿಂಗೇಶ್ವರ ದೇವಾಲಯ, ರಾಯಚೂರು



೧೭. ಹನುಮಲಿಂಗೇಶ್ವರ ದೇವಾಲಯ, ಉಡಮಗಲ್ ಖಾನಾಪುರ



೧೮. ಭೋಗೇಶ್ವರ ದೇವಾಲಯ, ಕಲ್ಮಾಲ



೧೯. ಆಂಜನೇಯ ದೇವಾಲಯ, ಹೀರಾಪುರ



೨೧. ತಿಮ್ಮಪ್ಪ ದೇವಾಲಯ, ಎಲೆಬಿಚ್ಚಾಲಿ



೨೨. ಆಂಜನೇಯ ದೇವಾಲಯ, ಎಲೆಬಿಚ್ಚಾಲಿ



೨೩. ವೀರಭದ್ರ ದೇವಾಲಯ, ಎಲೆಬಿಚ್ಚಾಲಿ



೨೪. ಬೀರಲಿಂಗೇಶ್ವರ ದೇವಾಲಯ, ಜಾಲಿಬೆಂಚಿ

